# ವಿಶ್ವಪ್ರೇಮಿ

ರಾ. ಮೊ. ವಿಶ್ವಾಮಿತ್ರ



ವಿವೇಕ ಸಾಹಿತ್ಯ ಮಾಲೆ,
ಮಂಗಳೂರ-3.

ಕುಸುಮ ೧.

# ವಿಶ್ವಪ್ರೇಮಿ

(ಭಾರತದ ಭಾಗ್ಯ ಜನಕ ಚಿತ್ರ-ಕಾದಂಬರಿ)

— ರಾ. ಮೊ. ವಿಶ್ವಾಮಿತ್ರ



ವಿವೇಕ ಸಾಹಿತ್ಯ ಮಾಲೆ

ಡಿ. ನಂಬ್ರ 6-41  ಮಣ್ಣಗುಡ್ಡೆ

ಮಂಗಳೂರ-3

ಒಂದನೆಯ ಮುದ್ರಣ ಜನವರಿ ೧೯೫೨.



ಬೆಲೆ ಎರಡು ರೂಪಾಯಿ

ಮುದ್ರಕರು:
ಸರಸ್ವತಿ
ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್,
ಮಂಗಳೂರ-1.

ಸಂಪಾದಕ:
ರಾಮು ಮೊಳೆಯಾರ,
ವಿದ್ವಾನ್,
ಮಂಗಳೂರ-3.

# ಎರಡು ಮಾತು

"ವಿಶ್ವಪ್ರೇಮಿ" ಅಣ್ಣ ತಮ್ಮಂದಿರ ಸರಸ ಸಂಭಾಷಣಾರೂಪದಲ್ಲಿ ಚಿತ್ರಿಸಲಾದ ವಿಶ್ವಬಾಂಧವ್ಯಕ್ಕಾಗಿ ದುಡಿದ ಮಹಾತ್ಮಾ ಗಾಂಧಿಯವರ ಜೀವನ ಚರಿತ್ರೆಯನ್ನೊಳಗೊಂಡ ನವೀನ ಕೃತಿ. ಭಾರತದ ಭಾಗ್ಯಜನಕನ ದಿವ್ಯತತ್ವಗಳನ್ನು ಕಾವ್ಯಶೈಲಿಯಿಂದ ಜನಮನರಂಜನೆಯಾಗುವಂತೆ ಇದ ರಲ್ಲಿ ನಿರೂಪಿಸಲಾಗಿದೆ. ಈ ಕಾದಂಬರಿಗೆ ಮಹಾತ್ಮರ ಸತ್ಯಶೋಧನೆಯೇ ಅಡಿಗಲ್ಲು. ಈ ಸುಂದರ ಹೊತ್ತಗೆಯನ್ನು ನವಿನ್ಮಾ ಸಾಹಿತ್ಯಮಾಲೆಯ ಒಂದನೆಯ ಕುಸುಮವಾಗಿ ಕನ್ನಡಿಗರ ಮುಂದಿಡಲು ತುಂಬಾ ಹರುಷ ವಾಗುತ್ತಿದೆ.

ನವಿನ್ಮಾ ಯೋಜನೆಗೆ ಕನ್ನಡಿಗರು ಸಂಪೂರ್ಣ ಬೆಂಬಲವಿತ್ತು ಸಹ ಕರಿಸಿ ಮುನ್ನಡೆಸುವರೆಂದು ನಂಬುವೆವು.

ಈ ಹೊತ್ತಗೆಯನ್ನು ಶೀಘ್ರದಲ್ಲಿಯೇ ಅಂದವಾಗಿ ಮುದ್ರಿಸಿ ಕೊಟ್ಟು ಬೇಗನೆ ಪ್ರಕಟವಾಗುವಂತೆ ಮಾಡಿದ ಸರಸ್ವತಿ ಮುದ್ರಣಾಲಯದ ಅಧಿ ಕಾರಿಗಳಾದ ಶ್ರೀ। ಯು. ಗಣೇಶ ಶೆಣೈಯವರಿಗೂ ಅಚ್ಚು ಕೂಟದ ಕೆಲಸಗಾರರಿಗೂ ಕೃತಜ್ಞತೆಗಳು.

— ಸಂಪಾದಕ.

# ವಿಶ್ವಪ್ರೇಮಿ

೧

"ಅಣ್ಣಾ! ನನಗೊಂದು ಕತೆ ಹೇಳುತ್ತೀರಾ?"

"ನಿನಗೆಷ್ಟು ಕತೆ ಹೇಳಲೋ ತಮ್ಮಾ! ನನ್ನನ್ನೇನು ಕತೆಯ ಕಲ್ಪವೃಕ್ಷವೆಂದು ತಿಳಕೊಂಡೆಯಾ? ರಾಮಾಯಣ, ಭಾರತ, ಎಲ್ಲಾ ಕತೆ ಹೇಳಿ ಆಯಿತಲ್ಲವೇ?"

"ಹೌದಣ್ಣಾ! ನಿಮ್ಮ ಕತೆ ಕೇಳಿ ನನಗೆ ಒಳ್ಳೆ ಹೆಸರು ಸಿಕ್ಕಿದೆ, ಮೊನ್ನೆ ಶಾಲೆಯಲ್ಲಿ ನಮ್ಮ ನೆರೆಯ ಕಾಳಪ್ಪನೊಡನೆ ಮಾಸ್ತು ಶ್ರೀರಾಮನ ತಾಯಿ ಯಾರು? ಎಂದು ಕೇಳಿದರು. "ಕುಂತಿದೇವಿ" ಎಂದನಣ್ಣ. ನನಗೊಳಗೊಳಗೇ ನಗು ಬಂತು. ಮತ್ತೂ ಕೆಲವರನ್ನು ಕೇಳಿದರು. ಒಬ್ಬ ಅಹಲ್ಯಾದೇವಿ ಎಂದ. ಮತ್ತೊಬ್ಬ ಸುಮಿತ್ರೆ ಎಂದ. ಮಗುದೊಬ್ಬ ಮಂಡೋದರಿ ಎಂದ. ಮಾಸ್ಟಿಗೂ ನಗು ಬಂತು. ನಕ್ಕು ನಕ್ಕು ಸಾಕಾಯಿತು. ನನ್ನ ಹತ್ತಿರ ಕೇಳಿದರು. ನಾನು—"ಕೌಸಲ್ಯಾದೇವಿ" ಎಂದೆ. ನನ್ನನ್ನು ಮಾಸ್ತು ಹೊಗಳಿದರು. ಎಲ್ಲರಿಗೂ ಮತ್ತೆ ರಾಮಾಯಣದ ಕತೆಯನ್ನು ನಾನೇ ಹೇಳಿದೆ. ಅಣ್ಣಾ! ನನಗೆ ರಾಮಾಯಣದ ಕತೆ ಕೇಳಿದರೆ ಶ್ರೀರಾಮನ ಹಾಗಾಗಬೇಕು; ಭಾರತದ ಕತೆ ಕೇಳಿದಾಗ ಅಭಿಮನ್ಯುವಿನ ಹಾಗಾಗಬೇಕು ಎಂದೆನ್ನಿಸಿತು. ರಾಮಾಯಣದಲ್ಲಿ ಆ ರಾಮಲಕ್ಷ್ಮಣರು ಎಷ್ಟು ಪ್ರೀತಿಯಿಂದಿದ್ದರೋ ಹಾಗೆ ನಾನೂ ನೀವೂ ಬಹು ಮಮತೆಯಿಂದಿರಬೇಕು; ಅಣ್ಣ ಹೇಳಿದ ಹಾಗೆ ಕೇಳಬೇಕು ಎಂದಾಗಿದೆ. ನನಗೆ ಇನ್ನೂ ಒಳ್ಳೊಳ್ಳೆಯ ಕತೆ ಹೇಳಲೇ ಬೇಕು. ನೀವು ನನ್ನ ಅಣ್ಣ ಅಲ್ಲವೇ?

"ತಮ್ಮಾ! ನೀನು ಬಲು ಜಾಣ. ನಿನಗೀಗ ಕತೆ ಹೇಳಲೇ ಬೇಕು ಅಲ್ಲವೇ? ಇನ್ನು ಯಾವ ಕತೆ ಹೇಳಲಿ ಎಂದು ಯೋಚಿಸುತ್ತಿದ್ದೇನೆ."

"ಯೋಚನೆ ಬೇಡಣ್ಣಾ! ನನಗೆ ನಮ್ಮಜ್ಜನ ಕತೆ ಕೇಳಬೇಕು ಎಂದಾಸೆಯಿದೆ."

"ಯಾವ ಅಜ್ಜನದೋ?"

"ಗಾಂಧಿ ಅಜ್ಜನದು. 'ಮಕ್ಕಳ ತಾತಾ ಹರಿಜನ ಪ್ರೀತಾ' ಎಂದೆಲ್ಲಾ ಹಾಡುಂಟಲ್ಲವೇ? ಈ ನಮ್ಮಜ್ಜನ ಹಾಗಿರುವ ಮಂದಿ ಲೋಕದಲ್ಲೇ ಹುಟ್ಟಿಲ್ಲ; ಎಂದು ಹೇಳುವುದನ್ನು ಕೇಳಿದ್ದೇನೆ. ಅವರ ಕತೆಯನ್ನೇ ಹೇಳಿರಿ.

"ಅಹುದು ತಮ್ಮಾ! ಪ್ರಪಂಚದಲ್ಲಿ ನಮ್ಮಜ್ಜನಂತಹ ವಿಶ್ವಪ್ರೇಮಿ ಇನ್ನೊಬ್ಬ ಹುಟ್ಟಿಲ್ಲ. ಮಗುವಿನ ಸರಳತನ. ಅಮ್ಮನ ಶುದ್ಧಪ್ರೇಮ. ಹೂವಿನ ಕೋಮಲತೆ. ಹರಿಶ್ಚಂದ್ರನ ಸತ್ಯನಿಷ್ಠೆ. ಭಗೀರಥನ ಮಹಾ ಯತ್ನ, ದೇವರ ಸಮಾನತೆ, ಇವುಗಳ ಮೂರ್ತಿಮಂತ ಸ್ವರೂಪನೇ ಆದ ನಮ್ಮಜ್ಜನನ್ನು ಎಂದೆಂದೂ ಯಾರಿಂದಲೂ ಮರೆಯುವುದು ಅಸಾಧ್ಯ.

"ಅಣ್ಣಾ! ನನಗೆ ಬಹಳ ಹೆಮ್ಮೆಯಾಗುತ್ತಿದೆ. ವಿಶ್ವಪ್ರೇಮಿ ನಮ್ಮಜ್ಜ. ಪ್ರೇಮದಿಂದ ಜಗತ್ತನ್ನೇ ಗೆದ್ದವ ನಮ್ಮಜ್ಜ, ಎಂದರೆ ನಮ್ಮಷ್ಟು ಭಾಗ್ಯಶಾಲಿ ಗಳಾರಣ್ಣಾ!"

"ಸತ್ಯವನ್ನೇ ಆಡಿದೆ. ಪುಣ್ಯಪುರುಷರ ಜನ್ಮಭೂಮಿಯಾದ ಭಾರತ ದಲ್ಲಿ ಜನ್ಮವೆತ್ತಿದ ನಾವೇ ನಿಜವಾದ ಭಾಗ್ಯಶಾಲಿಗಳು. ರಾಮಕೃಷ್ಣಾದಿ ಅವತಾರ ಪುರುಷರೂ ಬಲಿ ಶಿಬಿಯಂಥಾ ದಾನಶೂರರೂ, ಅಶೋಕ ಹರ್ಷ ಅಕ್ಬರರಂಥಾ ರಾಜಶ್ರೇಷ್ಠರೂ, ಯಾಜ್ಞವಲ್ಕ್ಯಬುದ್ಧರಂಥಾ ದಿವ್ಯಜ್ಞಾನಿ ಗಳೂ ಹುಟ್ಟಿದ ಪುಣ್ಯಭೂಮಿಯಲ್ಲಿ ನಾವು ಜನಿಸಬೇಕಾದರೆ ಮಹಾಪುಣ್ಯ ವಂತರಾಗಿರಲೇ ಬೇಕು. ವಿಶ್ವಕವಿ-ರವೀಂದ್ರನಾಥ ಠಾಕೂರರೂ ವಿಶ್ವಗುರು ಗಾಂಧೀಜಿಯೂ ನಮ್ಮ ಹಿರಿಯರೆಂದು ಹೇಳಲು ನಮಗೆಷ್ಟು ಉಲ್ಲಾಸ ತೋರದು.

"ಅವರು ಹುಟ್ಟಿದ ದೇಶದಲ್ಲಿ ಹುಟ್ಟಿದ ನಾವು ಅವರಂತೆಯೇ ಆಗ ಬೇಕು; ಅವರ ಗುಣಗಳನ್ನು ಅನುಸರಿಸಿ ನಡೆಯಬೇಕು, ನಮ್ಮ ನಾಡಿಗೆ ಕೀರ್ತಿ ತರಬೇಕು ಎಂದು ನನಗನ್ನಿಸುತ್ತದಣ್ಣಾ!"

"ತಮ್ಮಾ! ಗಾಂಧೀಜಿ ನಿಜವಾಗಿಯೂ ಅವತಾರ ಪುರುಷರು. ಅವರ ದಿವ್ಯಜೀವನ ಚರಿತ್ರೆ ಓದಿದರೆ ನಿಜವಾಗಿಯೂ ಇಂತಿರುವ ಒಬ್ಬ ಮಹಾ ಪುರುಷನು ಜನ್ಮವೆತ್ತಿರುವನೇ? ಎಂದು ಮುಂದಿನ ಮಕ್ಕಳು ವಿಸ್ಮಯ

ದಿಂದ ಕೇಳಬಹುದು, ಈ ಪುಣ್ಯಪುರುಷನ ಜೀವನ ಚರಿತ್ರೆಯನ್ನು ತಿಳಿಯುವ ಕುತೂಹಲ ನಿನಗುಂಟಾದುದರಲ್ಲಿ ವಿಶೇಷವಿಲ್ಲ. ಗಾಂಧೀಜಿಯ ಜೀವನದ ಕತೆ ಕಟ್ಟುನಿಟ್ಟಿನ ಪೊಳ್ಳು ಕತೆಯಲ್ಲ. ಲೋಕದ ಹಿತಕ್ಕೆ ಬಾಳ್ವೆಯನ್ನು ಹೇಗೆ ಹೊಂದಿಸಿಕೊಂಡು ಉತ್ತಮನಾಗಬಹುದೆಂದು ವಿಶ್ವ ಕಲ್ಯಾಣಕ್ಕಾಗಿ ಜೀವನವನ್ನು ಧಾರೆಯೆರೆದು ತೋರಿಸಿ ಕೊಟ್ಟ ಒಬ್ಬ ಆದರ್ಶವ್ಯಕ್ತಿ ಎಂದರೆ ಅವನೊಬ್ಬನೇ ನಮ್ಮಜ್ಜ ವಿಶ್ವಬಂಧು ಮಹಾತ್ಮಾ ಗಾಂಧಿ. ಅವರ ನಡೆ ನುಡಿಯನ್ನನುಸರಿಸಬೇಕು ಎಂಬ ಹಂಬಲು ನಿನ್ನಂಥಾ ಭಾರತೀಯ ಕುವರರಲ್ಲಿ ಸಹಜವಾಗಿಯೇ ಉತ್ಪನ್ನವಾಗಬೇಕು. ನಮ್ಮ ಹಿರಿಯರ ರಕ್ತಗುಣ ನಮ್ಮಲ್ಲಿ ಕಂಡು ಬರಬೇಡವೇ? ನಮ್ಮ ಹಿರಿಯರ ಶಕ್ತಿ ನಿನ್ನಂಥವರಲ್ಲಿ ಕಂಡುಬರಲಿ. ಅವರ ದಿವ್ಯ ಆಶೀರ್ವಾದ ಬಲವಿರಲಿ."

"ನಮ್ಮಜ್ಜನ ವಿಚಾರ ನೀವು ಒಂದೊಂದು ನುಡಿ ಆಡಿದಂತೆ ನನಗೇಕೋ ಆವೇಶ ಬರುತ್ತಿದೆ. ಮೈಪುಳಕಗೊಳ್ಳುತ್ತಿದೆ. ವಿಶ್ವಪ್ರೇಮಿ, ಅವತಾರ ಪುರುಷ, ನಮ್ಮಜ್ಜ ಇಂದಿಲ್ಲವಲ್ಲಾ! ಅವರನ್ನು ನೋಡುವ ಭಾಗ್ಯ ಇಲ್ಲದೆ ಹೋಯಿತಲ್ಲಾ! ಅವರನ್ನು ಕಂಡ ಕಣ್ಣುಗಳೇ ಧನ್ಯ. ನಾನು ಕೆಲಕಾಲ ಮೊದಲೇ ಹುಟ್ಟಿ ದೊಡ್ಡವನಾಗಿರಬೇಕಿತ್ತು, ಹಾಗಿದ್ದರೆ ನೋಡಿ ಪುಣ್ಯ ಕಟ್ಟಿಕೊಳ್ಳುತ್ತಿದ್ದೆ ಎಂದು ತೋರುತ್ತಿದೆ."

"ತಮ್ಮಾ ಅವರನ್ನು ಕಾಣಲಾಗಲಿಲ್ಲವೆಂದು ಕೊರಗಬೇಡ. ದೇವರಿಗೆ ಸಮಾನರಾಗಿರುವ ಅವರನ್ನು ಕಂಡವರೇ ಪುಣ್ಯಶಾಲಿಗಳೆಂದು ನಂಬಬೇಡ. ದೇವಸ್ಥಾನ ಕಂಡರೂ ದೇವರ ಬಿಂಬವನ್ನು ಕಂಡರೂ ಎಷ್ಟು ಮಂದಿ ಗೌರವಿಸದೆ ಹೋಗುವುದಿಲ್ಲ. ದೇವನ ಒಲವಿಗಾಗಿ ದೇವನೆಡೆಗೇ ಹೋಗಬೇಕಾಗಿಲ್ಲ. ನಂಬಿದಲ್ಲಿ ದೇವನಿದ್ದಾನೆ ಎಂಬುದು ನಿನಗೆ ಗೊತ್ತಿಲ್ಲವೇನು? ಅವರನ್ನು ಕಾಣಲಾಗದಿದ್ದರೂ ಅವರ ದಿವ್ಯಚರಿತ್ರೆಯನ್ನು ತಿಳಿದು ಅವರ ಆದರ್ಶಗುಣಗಳನ್ನನುಸರಿಸಿ ವಿಶ್ವಾಸಪೂರ್ವಕ ಜೀವನವನ್ನು ನಡೆಸಿಕೊಂಡು ಬಂದಲ್ಲಿ ನೀನೊಬ್ಬ ಮಹಾಭಾಗ್ಯಶಾಲಿ ಎಂದು ನಾನು ಹೇಳಬಲ್ಲೆ. ನನ್ನ ತಮ್ಮನ ಬಗ್ಗೆ ಅಪಾರ ಹೆಮ್ಮೆ ಪಡಬಲ್ಲೆ."

"ಗಾಂಧೀಜಿ ನಿಜವಾಗಿ ದೇವರೆಂದು ತಿಳಿಯುತ್ತೇನಣ್ಣ. ಗುಣ ಸಂಪನ್ನನಾದ ವ್ಯಕ್ತಿದೇವನೆಂದೇ ನನ್ನ ನಂಬುಗೆ. ದಿನನಿತ್ಯ ಅವರನ್ನು

ಧ್ಯಾನಿಸುತ್ತೇನೆ. ಅವರಡಿಗೆರಗುತ್ತೇನೆ. ಹರಸಿ ಮುನ್ನಡೆಸುವಂತೆ ಕೇಳುತ್ತೇನೆ."

"ಮಹಾಪುರುಷರ ಪುಣ್ಯಸ್ಮೃತಿ ಮಹಾತ್ಮನನ್ನಾಗಿ ಮಾಡುವುದು. ಮನದ ಬಯಕೆಯೇ ಸದಾ ಸಾಧನೆಯಾಗುವುದು. ಸಾಧನೆಯೇ ಸಿದ್ಧಿಗೆ ದಾರಿಯಾಗುವುದು. ಗಾಂಧೀಜಿಯ ಆತ್ಮಶಕ್ತಿ ಸಾಮಾನ್ಯವೇ? ನಮ್ಮಜ್ಜನ ನುಡಿಗೆ ಶಕ್ತಿವಂತ ಅರಸರ ಕುಲವೇ ಗಡಗಡ ನಡುಗುತ್ತಿತ್ತು. ಅವರ ಮಾತೇ ಪ್ರಮಾಣವಾಗಿತ್ತು. ಯಾರನ್ನೂ ಅವರು ನೋಯಿಸಲಿಲ್ಲ. ಪ್ರೇಮದಿಂದ ವಿಶ್ವವನ್ನೇ ಗೆದ್ದರು!"

"ಅಬ್ಬಾ ಗಾಂಧೀಜಿಯ ಅತಿಮಾನುಷ ಶಕ್ತಿಯೇ? ಅಣ್ಣಾ! ಹುಟ್ಟುವುದಾದರೆ ನಮ್ಮಜ್ಜನಂಥವರೇ ಹುಟ್ಟಬೇಕು. ಪ್ರೀತಿಯಿಂದ ಜಗತ್ತನ್ನೇ ಗೆದ್ದವರು ಎಂದರೆ ಸೋಜಿಗವೇ ಸರಿ."

"ಪ್ರೇಮದ ಮೂರ್ತಿ ಗಾಂಧೀಜಿ. ಅವರು ಸದಾ ಅನ್ಯರ ಹಿತವನ್ನೇ ಬಗೆದರು. ದಿನನಿತ್ಯವೂ ಅವರು ದುಃಖಸಂತ್ರಸ್ತ ಪ್ರಾಣಿಗಳ ಕಷ್ಟ ನಿವಾರಣೆಯಾಗಲಿ (ಕಾಮಯೇ ದುಃಖ ತಪ್ತಾನಾಮ್ ಪ್ರಾಣಿನಾಮ್ ಆರ್ತಿನಾಶನಮ್) ಎಂದೂ ಎಲ್ಲಾ ಮಂದಿಗೂ ಒಳ್ಳೆಯ ಬುದ್ಧಿ ಬರಲೆಂದೂ (ಸಬ್ ಕೋ ಸನ್ಮತಿದೇಭಗವನ್) ಪ್ರಾರ್ಥಿಸುತ್ತಿದ್ದರು. ಯಾರು ಹಾಳಾದರೆ ನಮಗೇನು ಎನ್ನುವ ಈ ಜಗತ್ತಿನಲ್ಲಿ ಈ ರೀತಿಯ ವ್ಯಕ್ತಿಯ ಚರಿತ್ರೆ ಎಷ್ಟು ಗೌರವಾರ್ಹವೋ ನೀನೇ ಹೇಳು."

"ಅದೊಂದೂ ನನಗರಿಯದಣ್ಣಾ! ಗಾಂಧೀಜಿಯ ಅಲ್ಪಸ್ವಲ್ಪ ಕತೆ ಕೇಳಿ ಗೊತ್ತು ನನಗೆ. ಅವರು ಮಕ್ಕಳನ್ನು ತುಂಬಾ ಪ್ರೀತಿಸುವರು; ಅಮ್ಮನಿಗಿಂತಲೂ ವಿಶೇಷವಾದ ಮಮತೆ ಅವರಲ್ಲಿತ್ತು. ಪ್ರಪಂಚವೇ ಅವರನ್ನು ಮಹಾತ್ಮರೆಂದು ಒಪ್ಪಿಕೊಂಡು ಗೌರವಿಸುತ್ತಿದ್ದರೂ ಎಳ್ಳಷ್ಟು ಅಹಂಕಾರ ಪಡದವರು ಎಂದೆಲ್ಲಾ ಹೇಳುವುದನ್ನು ಕೆಲವೊಮ್ಮೆ ನಿಮ್ಮ ಬಾಯಿಯಿಂದಲೇ ಕೇಳಿದ್ದೆ. ಆದ್ದರಿಂದಲೇ ಅವರ ಕತೆ ಹೇಳಿ ಎಂದು ಕೇಳಿಕೊಂಡೆ."

"ಅವರು ಅಹಂಕಾರಪಡುವುದಾದರೂ ಎಂತು. ತಮ್ಮಾ! 'ತುಂಬಿದ ಕೊಡ ತುಳುಕಾದಂತೆ, ವಿಶ್ವವನ್ನೇಪ್ರೀತಿಸುವ ಅವರು ಯಾರಲ್ಲಿ ದೊಡ್ಡವ

ರಂತೆ ನಟಿಸಿಕೊಳ್ಳುವರು. ತಾಯಿ ತನ್ನ ಮಗುವಿನೊಡನೆ ತಾನು ದೊಡ್ಡವ ಳೆಂದು ಅಹಂಭಾವ ತೋರಿಸುವಳೇ? ಮಕ್ಕಳ ಸೇವೆಯಲ್ಲೇ, ಮಕ್ಕಳ ಭವಿತವ್ಯದ ಆಕಾಂಕ್ಷೆಯಲ್ಲೇ ತಾಯ ಬಾಳು ಸವೆಯುತ್ತಿರುವಂತೆ ನಮ್ಮ ಜ್ಜನ ಬಾಳೂ ನಾಡ ಮಕ್ಕಳ ಏಳಿಗೆಗಾಗಿ ಸಂದಿತು. ಭಾರತ ಬಡವರ ನಾಡು, ತಾನೂ ಬಡವನೆಂದು ಚಿಂದಿಯುಟ್ಟು ಮಾನ ಮುಚ್ಚಿಕೊಂಡ ರಲ್ಲವೇ?"

"ಅಣ್ಣಾ! ನನಗಿದು ಬಹಳ ವಿಚಿತ್ರವಾಗಿ ತೋರುತ್ತಿದೆ. ಗಾಂಧೀಜಿ ಲಂಡನಿಗೆ ಹೋಗಿದ್ದಾರಂತೆ. ವಕೀಲರಂತೆ. ಮಕ್ಕಳು ಸಾಮಾನ್ಯ ಹೈ ಸ್ಕೂಲ್ ಮೆಟ್ಟಲು ಹತ್ತಿದರೇ ಸಾಕು. ಸೂಟು ಬೂಟು ಹಾಕಿ ಏನು ಚಂದ ಮಾಡುತ್ತಾರೆ. ದೊಡ್ಡ ದೊರೆಯ ಹಾಗಿರುತ್ತಾರೆ. ನನ್ನಂಥವರು ಹರಕಂಗಿ ಹಾಕಿದರೆ ನಗುತ್ತಾರೆ. ಇಷ್ಟ ಕಲಿತ ನಮ್ಮಜ್ಜಗೆ ಒಂದು ಸಣ್ಣ ಬಹಿರ್ವಾಸ ಮಾತ್ರ ಉಟ್ಟುಕೊಳ್ಳುವುದಕ್ಕೆ ಹೇಗೆ ಮನಸ್ಸು ಬಂತು. ನಾಚಿಕೆ ಆಗಲಿಲ್ಲವೇ?"

"ತಮ್ಮಾ! ತಿಳಿದವರ ನಾಚಿಕೆಗೂ ತಿಳಿಯದವರ ನಾಚಿಕೆಗೂ ಎಷ್ಟೋ ಅಭ್ಯಂತರವಿದೆ. ತಿಳುವಳಿಕೆಯುಳ್ಳವರು ಮಾನಗೆಟ್ಟರೆ ಮಾತ್ರ ನಾಚಿಕೆ ಗೊಳ್ಳುತ್ತಾರೆ. ಮಾನ ಕಾಯುವಷ್ಟು ಬಟ್ಟೆ ಇದ್ದರೆ ಸಾಕು ಎಂದು ಭಾರತದ ಬಡ ಸೋದರ ಸೋದರಿಯರನ್ನು ಕಂಡು ಅವರು ನಿಶ್ಚೈಸಿ ಕೊಂಡರು. ವೇಷಭೂಷಣಕ್ಕೆ ಮರ್ಯಾದೆ ಸಲ್ಲದು. 'ಮಾನವನ ಉಚ್ಚ ಗುಣಗಳೇ ಅವನನ್ನು ಗೌರವಿಸುವಂತೆ ಮಾಡುತ್ತವೆ' ಎಂಬುದನ್ನು ನಮ್ಮ ಜ್ಜನೇ ನಮಗೆ ಆಚರಣೆಯಲ್ಲಿ ತೋರಿಸಿಕೊಟ್ಟರು."

"ಅಣ್ಣಾ! ಆ ನಮ್ಮ ಹುಚ್ಚ ಹೇಟು ಬೂಟು ಹಾಕಿ ಬರುತ್ತಾನೆ. ಆದರೆ ಅವನಿಗೆ ಕಲ್ಲೆಸೆಯುತ್ತಾರೆ. ದಾರಿಯಿಡಿ ಬೈದುಕೊಂಡು ಅವನು ಹೋಗುತ್ತಾನೆ. ಅವನನ್ನು ಯಾರೂ ಲೆಕ್ಕಿಸುವುದೇ ಇಲ್ಲ."

"ಅದೇ ನಿಜ. ನಿನ್ನಂಥಾ ತಮ್ಮಂದಿರು ವೇಷಭೂಷಣಕ್ಕಲ್ಲ ಮರ್ಯಾದೆ, ವ್ಯಕ್ತಿಗೆ—ಅವನ ಗುಣಕ್ಕೆ ಎಂಬುದನ್ನರಿತು ಗುಣಸಂಪನ್ನರಾಗಬೇಕು. ತುಂಬಾ ಸತ್ಕಾರ್ಯ ಮಾಡಿ ಕೀರ್ತಿಗಳಿಸಬೇಕು. ನಮ್ಮಜ್ಜನ ಹೃದಯ

ಎಷ್ಟು ಕೋಮಲವೋ ನನಗರಿಯದು. ಅವರನ್ನು ವಿಶ್ವಪ್ರೇಮಿ ಎಂದು ಸುಮ್ಮನೇ ಹೇಳಿದ್ದಲ್ಲ."

"ಅದೇಕೆ?"

"ಅದಕ್ಕೂ ಕಾರಣ ಇದೆ?"

"ಅದೇನು ಹೇಳಬಾರದೇ?"

"ನೀನೇ ಊಹಿಸಿ ಹೇಳು."

"ಅದೇನು ಅಷ್ಟು ಗುಟ್ಟು?"

"ಗುಟ್ಟಲ್ಲ. ನಮ್ಮಜ್ಜ ಒಮ್ಮೆ ಉತ್ಕಲ ಪ್ರಾಂತದಲ್ಲಿ ಸಂಚರಿಸುವಾಗ ಹರಕು ಗುಡಿಸಲೊಂದರಲ್ಲಿ ಹರಕಾದ ಮಸಕು ಚಿಂದಿಯೊಂದನ್ನುಟ್ಟ ಮುದುಕಿಯನ್ನು ಕಂಡರು—"

"ತಿಳಿಯಿತು ತಿಳಿಯಿತು. ಅವರ ಹಾಗೆ ಇವರೂ ಉಟ್ಟರು ಅಲ್ಲವೇ?"

"ಏನು ಅವರ ಹಾಗೆ ಸೀರೆ ಉಟ್ಟುಕೊಂಡರೇ?"

"ಇಲ್ಲಣ್ಣ, ತಮ್ಮನ ಮಾತಿಗೆ ನಗಬಾರದು. ಬಡವರ ಹಾಗೆ ಉಟ್ಟು ಕೊಂಡರು ಅಂದೆ."

"ನಿನಗೆ ಚಾಪಲ್ಯ ಹೆಚ್ಚು. ಮತ್ತೇಕೆ ಅರ್ಧದಲ್ಲೇ ಬಾಯಿಹಾಕುವೆ?"

"ಆದರೆ ಬೇಗ ಬೇಗನೆ ಹೇಳಿ."

"ಅಷ್ಟೂ ತಿಳಿಯಲು ಆತುರವೇ? ಆದರೆ ಕೇಳು. ಆ ತಾಯಿಯು ಕೊಳಕು ಚಿಂದಿಯನ್ನು ಕಂಡು—'ಅವ್ವಾ ಈ ಮಾಸಿದ ಚಿಂದಿಯನ್ನೇಕೆ ಉಟ್ಟಿರುವಿರಿ?' ಎಂದು ಕೇಳಿದರಂತೆ. ಅದಕ್ಕೆ 'ಇದನ್ನು ಬದಲಾಯಿಸಿ ಒಗೆಯುವುದಕ್ಕೆ ಬೇರೆ ಚಿಂದಿಯಾದರೂ ಬೇಕಲ್ಲವೇ?' ಎಂದು ಉತ್ತರ ಕೊಟ್ಟಳಂತೆ. ಆಗ ಗಾಂಧೀಜಿಗೆ—ಅಯ್ಯೋ ಭಾರತೀಯ ಸೋದರಿಯರ ಪಾಡೇ! ಎಂದು ಮರುಕವುಂಟಾಗಿ—'ನಮ್ಮ ನಾಡಿನ ಅಕ್ಕತಂಗಿಯರು ಈ ಸ್ಥಿತಿಯಲ್ಲಿರುವಾಗ ತಾನಿನ್ನು ಎರಡು ಮೂರು ಬಟ್ಟೆಗಳನ್ನು ಧರಿಸಲಾರೆ. ಆ ತಾಯಿಗೆ ನನ್ನ ಉಡುಪನ್ನು ಕಂಡು ಏನನ್ನಿಸಿತೋ' ಎಂದು ಮನದಲ್ಲಿ ಕರಗಿ ಈ ಘಟನೆಯ ತರುವಾಯ ಗಾಂಧೀಜಿ ಸೊಂಟಕ್ಕೆ ಒಂದೇ ಒಂದು

ಬಟ್ಟೆಯನ್ನು ಸುತ್ತಿಕೊಳ್ಳುತ್ತಿದ್ದರು. ವಿಶೇಷ ಚಳಿಯಿದ್ದರೆ ಮತ್ತೊಂದು ಬಟ್ಟೆಯನ್ನು ಹೊದ್ದುಕೊಳ್ಳುತ್ತಿದ್ದರು."

"ಅಬ್ಬಾ! ಅಜ್ಜನ ತ್ಯಾಗವೇ?"

"ಅಜ್ಜನ ತ್ಯಾಗಕ್ಕೇನು ಕಡಮೆ. ದೇಶಕ್ಕಾಗಿ ಸರ್ವವನ್ನೂ ತ್ಯಾಗ ಮಾಡಿದವ ನಮ್ಮಜ್ಜ. ಸುಖವಾಗಿ ಕಾಲ ಕಳೆಯಬಹುದಾಗಿದ್ದ ಅವರು ಎಲ್ಲಾ ಸುಖಗಳನ್ನೂ ತ್ಯಜಿಸಿ ಜೀವಮಾನದ ಹೆಚ್ಚಿನ ಅಂಶವನ್ನೂ ಕಾರಾ ಗೃಹದಲ್ಲೇ ಕಳೆದರು. ಅದೂ ಸಾಲದುದಕ್ಕೆ ಆಗಾಗ ನಿರಶನವ್ರತ ಕೈಗೊಂಡರು."

"ನಮ್ಮಜ್ಜನಿಗೆ ಜನರಲ್ಲಿಷ್ಟು ಪ್ರೀತಿ. ಎಲ್ಲರನ್ನೂ ತನ್ನವರನ್ನಾಗಿಯೇ ಕಾಣಬೇಕಾದರೆ ಅವರ ಆ ಪ್ರೀತಿಯ ಸ್ವರೂಪ ಎಂತಹುದೋ ನನ್ನ ಕಲ್ಪನೆಗೇ ಮೀರಿದೆಯಣ್ಣ."

"ಎಲ್ಲರನ್ನೂ ಅಕ್ಕರೆಯಿಂದ ಕಂಡು ಎಲ್ಲರ ಹಿತಕ್ಕಾಗಿ ದುಡಿದು, ಅನ್ಯರ ಹಿತಕ್ಕಾಗಿ ಕಷ್ಟಪಡುವುದೇ ತನ್ನ ಪಾಲಿನ ಸುಖವೆಂದು ತಿಳಿದ ಅವರ ವಿಶ್ವಪ್ರೇಮವನ್ನು ನೆನೆದರೆ ನನಗೂ ನಿನಗೂ ಎಲ್ಲರಿಗೂ ವಿಸ್ಮಯವಾಗದಿರದು. ಒಂದು ಪ್ರಾಣಿಯನ್ನಾದರೂ ಹಿಂಸಿಸಬೇಡ; ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆಯನ್ನು ತೋರಿಸು; ಪುನಃ ಹೊಡೆಯದಿರು. ನಿನ್ನ ವೈರಿಯನ್ನೂ ಪ್ರೀತಿಸು ಎಂಬುದು ವಿಶ್ವಪ್ರೇಮಿಯಾದ ನಮ್ಮಜ್ಜನು ಆಚರಣೆಯಿಂದ ತೋರಿಸಿಕೊಟ್ಟ ಆದರ್ಶ ತತ್ವವಲ್ಲವೇ?"

"ನಾನೂ ನಮ್ಮಜ್ಜನ ಹಾಗೆ ಮಾಡುತ್ತೇನಣ್ಣ."

"ಮೆಚ್ಚಿದೆ ಎಲ್ಲರನ್ನೂ ಪ್ರೀತಿಸು"

"ಹಾಗೆಯೇ ಮಾಡುತ್ತೇನೆ. ತಮ್ಮನನ್ನು ಬಯ್ಯಲಾರೆ; ತಂಗಿಗೆ ಹೊಡೆಯಲಾರೆ. ಅಮ್ಮನಿಗೆ ಕಷ್ಟಕೊಡಲಾರೆ, ಎಲ್ಲರನ್ನೂ ಪ್ರೀತಿಸುತ್ತೇನೆ. ಎಲ್ಲರಿಗೂ ಬೇಕಾದ ಒಳ್ಳೆಯ ಕೆಲಸಮಾಡುತ್ತೇನೆ"

"ಒಳ್ಳೆಯದು, ತುಂಬಾ ಕಲಿಯಬೇಕು. ಸದ್ಗುಣಗಳಿಸಬೇಕು. ನೀನು ಎಲ್ಲರಿಗೂ ಒಳ್ಳೆಯದನ್ನು ಮಾಡಿದರೆ ನಿನಗೂ ಎಲ್ಲರೂ ಒಳ್ಳೆಯದನ್ನು ಮಾಡುವರು."

"ಹಾಗಾದರೆ ಬಹಳ ಸಂತೋಷವಾದೀತಣ್ಣ"

"ನೀನೂ ಗಾಂಧಿ ಅಜ್ಜನ ಹಾಗಾದರೆ, ತಮ್ಮ! ನಿನ್ನನ್ನು ನಾನು ದೇವರ ಹಾಗೆ ಹೊತ್ತುಕೊಂಡು ತಿರುಗುತ್ತೇನೆ."

"ಅಣ್ಣಾ! ಊಹೂಂ. ನಾನು ನಿನ್ನ ಸೇವೆ ಮಾಡಬೇಕಣ್ಣಾ. ನಾ ಬಿಡಲಾರೆ."

"ತಮ್ಮಾ ನೀನೇ ಬಲು ಜಾಣ"

---

೨

"ತಮ್ಮಾ! ನಮ್ಮಜ್ಜ ಸಾವಿರದ ಎಂಟುನೂರ ಅರುವತ್ತೊಂಭತ್ತನೇ ಅಕ್ಟೋಬರ ಎರಡರಂದು ಪೋರ್ ಬಂದರದ ಕಾತ್ಯಾವಾಡದಲ್ಲಿ ಜನ್ಮ ವೆತ್ತಿದರು"

"ಹೂಂ. ಅದೆಲ್ಲಾ ಸರಿ. ಆ ದಿನ ಹೇಗಿತ್ತು?"

"ಅಂದರೆ?"

"ಅಣ್ಣಾ! ಮಹಾಪುರುಷರೆಲ್ಲಾ ಹುಟ್ಟುವಾಗ ದೇವದುಂದುಭಿ ಮೊಳಗುತ್ತದೆ; ಪುಷ್ಪವೃಷ್ಟಿಯಾಗುತ್ತದೆ; ಎಂದೆಲ್ಲಾ ಹಿಂದೆ ಕತೆ ಹೇಳುವಾಗ ಹೇಳಿದ್ದಿರಿ. ಶ್ರೀರಾಮ ಹುಟ್ಟುವಾಗ ಐದು ಗ್ರಹಗಳು ಉಚ್ಚದಲ್ಲಿದ್ದು ವಂತೆ. ಕರ್ಕಟಕ ಲಗ್ನವಂತೆ. ಹಾಗೆಯೇ ನಮ್ಮಜ್ಜ ಹುಟ್ಟುವಾಗ ಏನೂ ವಿಶೇಷ ಆಗಲಿಲ್ಲವೇ? ಎಂದು ನನ್ನ ಪ್ರಶ್ನೆ."

"ಅದೆಲ್ಲಾ ಕವಿಗಳ ವರ್ಣನೆ. ಜನರನ್ನು ಮರುಳುಮಾಡುವುದಕ್ಕೆ ಹೇಳುವ ಮಾತು"

"ಆದರೆ ಅವರ ಹೆತ್ತವರು ಯಾರು ಎಂದು ಮರೆತುಬಿಟ್ಟೆನಲ್ಲಾ. ಸಿಟ್ಟು ಮಾಡಬೇಡಿ"

"ಸಿಟ್ಟು ಮಾಡಿದರೆ ನಿನಗೆ ನೆನಪಾದೀತೇ?"

"ಶಾಲೆಯಲ್ಲಿ ಮಾಸ್ತ್ರು ಪುನಃ ಕೇಳಿದರೆ, 'ಎಷ್ಟು ಹೇಳುವುದೋ ನಿನಗೆ' ಎಂದು ಸಿಟ್ಟು ಮಾಡುತ್ತಾರೆ. ಹಾಗಾಗಿ ಹೇಳಿದೆ."

"ತಮ್ಮನಿಗೆ ಗೊತ್ತಾಗಲಿಲ್ಲವೆಂದು ಅಣ್ಣ ಸಿಟ್ಟು ಮಾಡುತ್ತಾನೇನು? ನಮ್ಮಜ್ಜನ ತಂದೆ ಹೆಸರು ಕರಮುಚಂದ. ತಾಯಿಯ ಹೆಸರು ಪುತಲೀ ಬಾಯಿ."

"ನಮ್ಮಜ್ಜನವರನ್ನು ಹೆತ್ತವರೆಷ್ಟು ಪುಣ್ಯವಂತರೋ!"

"ನಿಜವಾಗಿಯೂ ಮಹಾಪುಣ್ಯ ಶಾಲಿಗಳು. ಅಜ್ಜನ ತಂದೆಯವರು ಮಂತ್ರಿಗಳಾಗಿದ್ದರು. ಪುತಲೀ ಬಾಯಿಯವರಿಗೆ ದೇವರಲ್ಲಿ ಅಚಲವಾದ ಭಕ್ತಿವಿಶ್ವಾಸಗಳಿದ್ದವು."

"ಆದ್ದರಿಂದಲೇ ನಮ್ಮಜ್ಜ ರಾಮಭಕ್ತರಾದರಲ್ಲವೇನಣ್ಣ! "ರಘುಪತಿ ರಾಘವರಾಜಾ ರಾಮ್" ಎಂದು ಹಾಡುವುದಕ್ಕೆ ಆ ಅಮ್ಮನ ಗುಣವೇ ಕಾರಣವಾಗಿರಬೇಕು ಅಲ್ಲವೇ?"

"ಹೌದು ನಮ್ಮಜ್ಜನ ತಾಯಿ ವ್ರತ ಉಪವಾಸಗಳನ್ನೆಲ್ಲಾ ಕೈಗೊಳ್ಳು ತ್ತಿದ್ದರಂತೆ. ಸೂರ್ಯ ದೇವರನ್ನು ಕಾಣದೆ ಉಣ್ಣಲಾರೆನೆಂದು ವ್ರತ ಕೆಲ ವೊಮ್ಮೆ ತೊಡುತ್ತಿದ್ದರಂತೆ. ಅದರಿಂದ ಮಳೆಗಾಲದಲ್ಲಿ ಕೆಲವು ದಿನಗಳ ತನಕ ಮೋಡವೇ ಕವಿದಿರುವುದರಿಂದ ದಿನಗಟ್ಟಲೆ ಉಪವಾಸ ಇರಬೇಕಾ ಗಿತ್ತಂತೆ."

"ಅಣ್ಣಾ ಅವರಿಗೆ ಉಪವಾಸ ಕುಳಿತಾಗ ತುಂಬಾ ಸಿಟ್ಟು ಬರು ತ್ತಿತ್ತೇ?"

"ತಮ್ಮಾ ಅದೇಕೆ ಹೀಗೆ ಕೇಳುತ್ತಿರುವೆ?"

"ನೆರೆಮನೆ ಅಜ್ಜ ಏಕಾದಶಿ ಉಪವಾಸ ಮಾಡಿ ರೇಗುವುದಿಲ್ಲವೇ? ಮಕ್ಕಳಿಗೆ ಮರಿಗಳಿಗೆ ಹೊಡೆದೂ ಬಿಡುತ್ತಾರೆ. ಅಂತೆಯೇ ಅವರು ಉಪವಾಸ ಕುಳಿತು ಗಲಾಟೆ ಮಾಡುತ್ತಿದ್ದಿರಬಹುದಲ್ಲವೇ? ನಮ್ಮ ಗಾಂಧಿ ಅಜ್ಜನಿಗೆ ಹೊಡೆದಿರಬಹುದು ಎಂದು ಯೋಚನೆ."

"ಇಲ್ಲ. ಅವರ ಸ್ವಭಾವ ಬಹುಕೋಮಲವಂತೆ; ಸೂರ್ಯ ದೇವ ರನ್ನು ಕಾಣದೆ, ಅಮ್ಮ ಉಪವಾಸ ಎರಡು ಮೂರು ದಿನ ಇರುವುದನ್ನು ಕಂಡ ಮಕ್ಕಳು–'ಅಮ್ಮಾ! ಉಣ್ಣ ಬಾರದೇ' ಎಂದು ಕೇಳಿದರೆ 'ದೇವ ರಿಗೆ ಇಷ್ಟವಿಲ್ಲ' ಎಂದು ಸುಮ್ಮನಾಗುತ್ತಿದ್ದರಂತೆ. ಅವರ ಸಹನೆ, ಆಚಾರ, ನಿಷ್ಠೆ, ಎಲ್ಲವೂ ಅಸಾಮಾನ್ಯವಾದವು."

"ಇಂಥಾ ವ್ರತ ನಿಷ್ಠೆಗಳ ಫಲರೂಪವಾಗಿ ಗಾಂಧೀಜಿ ಜನಿಸಿದರೇ? ದಶರಥ ಮಹಾರಾಜನು ಪುತ್ರಕಾಮೇಷ್ಠಿಯನ್ನು ಮಾಡಿ ಶ್ರೀರಾಮನನ್ನೂ ಅಲ್ಲದೆ ಲಕ್ಷ್ಮಣ ಭರತ ಶತ್ರುಘ್ನರನ್ನು ಪಡೆದನಲ್ಲವೇ? ದೇವರು ವರ ವಿತ್ತಂತೆ ಪುತಲೀ ಬಾಯಿಯವರಿಗೆ ಈ ಪುಣ್ಯ ಪುತ್ರರನ್ನು ಇತ್ತಿರಬೇಕಲ್ಲವೇ? ಅಣ್ಣಾ!"

"ಗಾಂಧೀಜಿ ಅವರ ಪುಣ್ಯಫಲ ರೂಪವಾಗಿ ಜನಿಸಿದರೆಂಬುದರಲ್ಲಿ ಸಂದೇಹವಿಲ್ಲ. ಅವರ ಮೂರು ಮಂದಿ ಮಕ್ಕಳಲ್ಲಿ ನಮ್ಮಜ್ಜನೇ ಕಿರಿಯುವನು. ಈ ಮಗನೊಡನೆ ಅವರು ಪ್ರತಿನಿತ್ಯವೂ ದೇಗುಲಕ್ಕೆ ಹೋಗಿ ಬರುತ್ತಿದ್ದರು. ಧರ್ಮಾಚಾರಗಳಲ್ಲಿ ಶ್ರದ್ಧಾವಂತೆಯಾದ ಪುಣ್ಯಮಾತೆ ಅವರು"

"ಅಣ್ಣಾ! ಗಾಂಧೀಜಿ ಮಗುವಾಗಿದ್ದಾಗ ಹೇಗಿದ್ದರು? ರಾಮಕೃಷ್ಣಾದಿಗಳಂತೆ ಏನಾದರೂ ಮಹಾಕಾರ್ಯಗಳನ್ನೆಸಗಿದರೇ? ಏನಾದರೂ ಮಾಡಿರಬಹುದು. ಮಾಡಿರಲೇ ಬೇಕು ನಮ್ಮಜ್ಜ"

"ಅದೆಲ್ಲಾ ಪುರಾಣಕತೆಯಲ್ಲವೇ ತಮ್ಮ. ಎಲ್ಲಾ ಮಕ್ಕಳಂತೆ ಅವರಿದ್ದರು. ಅವರು ಗಳಿಸಿಕೊಂಡ ಸದ್ಗುಣಗಳೇ ಅವರನ್ನು ಅತಿಮಾನುಷ ವ್ಯಕ್ತಿಯನ್ನಾಗಿ ಮಾಡಿದವು. ಅವರ ಆ ಗುಣವೇ ಅವರಿಗೆ ಮಹಾತ್ಮ ಎಂಬ ಗೌರವವನ್ನೊದಗಿಸಿ ಕೊಟ್ಟಿತು."

"ಆದರೆ ನನ್ನಂತೆಯೇ ಇದ್ದರೇ?"

"ಅವರು ನಿನ್ನಂತೆಯೇ ಚುರುಕಾಗಿದ್ದರು."

"ಸುಳ್ಳು ಹೇಳುತ್ತಿರಲಿಲ್ಲವೇ?"

"ಇಲ್ಲ ಅವಸರ ಪಡಬೇಡ. ಎಲ್ಲವನ್ನೂ ಹೇಳುತ್ತೇನೆ. ನಮ್ಮಜ್ಜನಿಗೆ ಇಬ್ಬರು ಅಣ್ಣಂದಿರಿದ್ದರು. ನಮ್ಮಜ್ಜ ಕಿರೀ ಮಗನಾದ್ದರಿಂದ ಅವರೊಡನೆ ಅವರ ಅಮ್ಮ ದೇವಸ್ಥಾನಕ್ಕೆ ಕರಕೊಂಡು ಹೋಗುತ್ತಿದ್ದರು. ತಮ್ಮಾ! ಆ ಹೊತ್ತಿಗೆ ನಮ್ಮಜ್ಜ ಹೇಡಿಗಳಾಗಿದ್ದರಂತೆ."

"ಏನು ನಮ್ಮಜ್ಜ ತುಂಬಾ ಹೆದರುತ್ತಿದ್ದರೇ? ಯಾಕೆ?"

"ಹಾವು, ಭೂತಪ್ರೇತಗಳ ಹೆದರಿಕೆ ಹೇಳಿ ತೀರದಷ್ಟಿತ್ತಂತೆ."

"ಆದರೆ ನಾನೇ ಹುಷಾರಣ್ಣ, ನನಗೆ ಹೆದರಿಕೆಯೇ ಇಲ್ಲ."

"ಹೌದೌದು. ಮೊನ್ನೆ ಪಡಸಾಲೆಯಲ್ಲಿ ಬೆಕ್ಕು ಹಾರಿದ್ದನ್ನು ಕಂಡು ಬೊಬ್ಬೆ ಹೊಡೆದ ಧೈರ್ಯಶಾಲಿ ನೀನೇ ಅಲ್ಲವೇ?"

"ಇಲ್ಲಣ್ಣಾ! ಅದೇಕೋ ಹಾಗಾಯಿತು."

"ಹೌದು ಹೆದರಿಕೆಯಾಯಿತು ಅಲ್ಲವೇ?"

"ಊಹುಂ."

"ಊಹುಂ ಎಂದರೇನೋ?"

"ಅಣ್ಣಾ! ಆ ಸುದ್ದಿ ಬಿಟ್ಟು ಬಿಡೋಣ. ಆದರೆ ಅವರ ಹೆದರಿಕೆ ಹೇಗೆ ಬಿಟ್ಟು ಹೋಯಿತು. ಅವರ ಹಾಗೆ ನಾನೂ ಮಾಡುತ್ತೇನೆ ಆಗದೇ?

"ದೇವರ ಹೆಸರನ್ನು ಸ್ಮರಿಸಿದರೆ ಭಯವಿಲ್ಲ; ಯಾವುವೂ ಏನೂ ಮಾಡಲಾರವು; ಗಾಬರಿಯಾದಾಗ ರಾಮ ಸ್ಮರಣೆ ಮಾಡಿದರೆ ದುಷ್ಟಶಕ್ತಿಗಳೆಲ್ಲಾ ಮಾಯವಾಗುವವು ಎಂದು ದಾದಿ ಹೇಳಿಕೊಟ್ಟಂತೆ ಅವರು ರಾಮಮಂತ್ರ ಜಪಿಸಿದರಂತೆ."

"ಓಹೋ ಆದರೆ ನಾನು ರಾಮರಾಮ ಎನ್ನುತ್ತೇನೆ. ರಾಮ ರಾಮಾ!"

"ಏನು ಈಗಲೂ ಗಾಬರಿಯಾಗುತ್ತಿದೆಯೇ?"

"ಇಲ್ಲ ಇಲ್ಲ, ಕತೆ ಹೇಳಿ."

"ಅವರು ತಂದೆ ತಾಯಿಗಳನ್ನು ತುಂಬಾ ಗೌರವಿಸುತಿದ್ದರು."

"ಅಣ್ಣಾ! ಒಂದು ಪ್ರಶ್ನೆ ಕೇಳುತ್ತೇನೆ"

"ಅಪ್ಪ ಅಮ್ಮ ಬೈದರೆ ಸಿಟ್ಟು ಬರುತ್ತಿರಲಿಲ್ಲವೇ?"

"ಬೈದರೆ ತಾನೆ ಸಿಟ್ಟು ಬರಬೇಕು. ಬೈದರೂ ಸಿಟ್ಟುಗೊಳ್ಳುವವರಲ್ಲ. ಅವರಿಂದೂ ಮಕ್ಕಳನ್ನು ಬೈಯುತ್ತಿರಲಿಲ್ಲ."

"ಆದರೆ ತಂಟೆ ಮಾಡುತ್ತಿರಲಿಲ್ಲವೇ?"

"ನಮ್ಮಜ್ಜ ಶ್ರವಣ ಕುಮಾರನ ಕತೆ ಓದಿದರಂತೆ. ಅವನು ತಂದೆ ತಾಯಂದಿರನ್ನು ಹೊತ್ತು ಯಾತ್ರೆಗೆ ಹೊರಟ ಒಂದು ಬೊಂಬೆ ಅವರಿಗೆ ಸಿಕ್ಕಿತಂತೆ. ಅದನ್ನು ಕಂಡು ಅವರಿಗೆ ತಾನೂ ಹಾಗಿರಬೇಕು ಎನ್ನಿಸಿತು".

"ಬೊಂಬೆ ಎಲ್ಲಿ ಸಿಕ್ಕಿತು?"

"ಮಾರುತ್ತಾ ಬಂದವರಿಂದ ತಕೊಂಡರು. ಅವರಿಗೆ ಸತ್ಯದ ಮೇಲೆ ತುಂಬಾ ವಿಶ್ವಾಸವಿತ್ತಲ್ಲವೇ?"

"ಹೌದಂತೆ"

"ಅಂತೆ, ಏನು? ಸತ್ಯ ಹರಿಶ್ಚಂದ್ರನ ನಾಟಕ ನೋಡಿ ಹಾಗಾಗ ಬೇಕು; ಸದಾ ಸತ್ಯವನ್ನೇ ಆಡಬೇಕು ಎಂದು ನಿರ್ಧರಿಸಿದರು. ಅವರೆಂದೂ ಸುಳ್ಳನ್ನು ಹೇಳಲಿಲ್ಲ."

"ಎಷ್ಟೊಳ್ಳೆಯ ಬುದ್ಧಿ ನಮ್ಮಜ್ಜನದು!"

"ನಮ್ಮಜ್ಜನನ್ನು ಎಲ್ಲಾ ಮಕ್ಕಳಂತೆ ಎಳವೆಯಲ್ಲಿ ಶಾಲೆಗೆ ಕಳುಹಿ ದರು. ಕಲಿಯುವುದರಲ್ಲಿ ಮೊದಮೊದಲು ಅಷ್ಟು ಚುರುಕಾಗಿರಲಿಲ್ಲ."

"ಆದರೆ ಚಿಕ್ಕಂದಿನಲ್ಲಿ ತಿಥಿ ವಾರ ನಕ್ಷತ್ರಗಳ ಹೆಸರು ಗೊತ್ತಿರ ಲಿಲ್ಲವೇ? ಮಗ್ಗಿ ಬರುತ್ತಿರಲಿಲ್ಲವೇ?"

"ಬರುತ್ತಿತ್ತು. ಆದರೆ ಕಲಿಯುವ ಉತ್ಸಾಹ ಮೊದಮೊದಲಿರಲಿಲ್ಲ. ಕಲಿಯದೆ ಇದ್ದರೆ ಅಧ್ಯಾಪಕರು ಬಿಡುತ್ತಾರೇನು?"

"ಚೆನ್ನಾಗಿ ಹೊಡೆಯುತ್ತಿದ್ದರೇ?"

"ಚೆನ್ನಾಗಿ ಕಲಿಸುತ್ತಿದ್ದರು. ಅಧ್ಯಾಪಕರನ್ನು ಮೊದಮೊದಲು ಅವರು ಅಷ್ಟು ಗೌರವಿಸುತ್ತಿರಲಿಲ್ಲ?"

"ಮತ್ತೇನು ಮಾಡುತ್ತಿದ್ದರು"

ತುಂಟ ಮಕ್ಕಳಂತೆ ನಗುತ್ತಿದ್ದಿರಬಹುದು?"

ಮಾಸ್ತರಿಗೆ ಹೊಡೆಯಲಿಲ್ಲ ತಾನೆ?"

ಮಾಸ್ತರಿಗೆ ಮಕ್ಕಳು ಹೊಡೆಯುತ್ತಾರೇನು?"

"ಅಲ್ಲಣ್ಣಾ! ನೀವು ಮೊನ್ನೆ ಪತ್ರಿಕೆ ಓದಿ ಕಾಲೇಜಿನ ಮಕ್ಕಳು ಪರೀಕ್ಷೆಯಲ್ಲಿ ಪ್ರತಿ ತೆಗೆಯಲು ಬಿಡದುದಕ್ಕಾಗಿ ಪ್ರಿನ್ಸಿಪಾಲರನ್ನು ಚೂರಿ ಹಾಕಿ ಕೊಂದರು ಎಂದಿರಲ್ಲವೇ?"

"ಅಂಥಾ ಬುದ್ಧಿ ನಮ್ಮಜ್ಜನದಲ್ಲ. ಅಧ್ಯಾಪಕರು ಮಕ್ಕಳಿಗಾಗಿ ತಮ್ಮ ಜೀವನವನ್ನೇ ಧಾರೆ ಎರೆಯುತ್ತಾರೆ. ಮಕ್ಕಳ ಅಭಿವೃದ್ಧಿಯನ್ನು ಕಂಡು ಸಂತೋಷಪಡುತ್ತಾರೆ ಎಂಬುದನ್ನೆಲ್ಲಾ ಬಹು ಬೇಗನೆ ಅವರು ತಿಳಿಕೊಂಡು ತಂದೆತಾಯಿಗಳಂತೆ ಅಧ್ಯಾಪಕರನ್ನು ಕಾಣುತ್ತಿದ್ದರು."

"ಮತ್ತೇನು ಮಾಡುತ್ತಿದ್ದರು."

"ಸಿಗರೇಟು ಸೇದುತ್ತಿದ್ದರು?"

"ಸಿಗರೇಟು!"

"ಅವರ ಚಿಕ್ಕಪ್ಪ ಎಳೆದೆಸೆದ ಸಿಗರೇಟಿನ ಕುತ್ತಿಗಳನ್ನು ಹೆಕ್ಕಿ ಕುಡಿಯುವುದಕ್ಕೆ ಅಭ್ಯಾಸ ಮಾಡಿದರು."

"ಮೂಗಿನಲ್ಲಿ ಹೊಗೆ ಬಿಡುತ್ತಿದ್ದರೆ?"

"ಹೌದು. ಸುರುಳಿ ಸುರುಳಿಯಾಗಿ ಮೋಡದಂತೆ ಹೊಗೆ ಬಿಡುತ್ತಿದ್ದರು."

"ಅಣ್ಣಾ ಸಿಗರೇಟ್ ಸೇದಿದರೆ ಉತ್ಸಾಹ ಬರುತ್ತದಂತೆ; ಶಕ್ತಿ ಬರುತ್ತದಂತೆ; ದೊಡ್ಡ ಜನ ಆಗುತ್ತಾರಂತೆ; ಅಲ್ಲವೇ?"

"ನಿನಗೆ ಹಾಗೆ ಯಾರಂದರು?"

"ಕಾಳಪ್ಪನೇ ಅಂದ. ಅವನು ಬೀಡಿ ಎಳೆಯುತ್ತಾನಣ್ಣ. ಬೀಡಿ ಎಳೆದರೆ ನೀನೂ ನನ್ನ ಹಾಗೆ ಗಟ್ಟಿಮುಟ್ಟಾಗಬಹುದು ಎನ್ನುತ್ತಾನೆ."

"ಅದನ್ನೆಲ್ಲಾ ನಂಬದಿರು. ಅದೆಲ್ಲಾ ಬಾಲ ಹೋದ ನರಿಯ ಉಪದೇಶದಂತೆಯೇ ಸರಿ. ಕಳ್ಳ ಚೋರವಿದ್ಯೆಯೇ ಮೇಲು ಎನ್ನುವಂತೆ."

"ಅಣ್ಣಾ ನಾನದನ್ನು ನಂಬಲೇ ಇಲ್ಲ."

"ಒಳ್ಳೆಯದೇ ಆಯಿತು. ಗಾಂಧೀಜಿ ನಂಟ ಹುಡುಗನೊಬ್ಬನ ಸಹವಾಸದಿಂದಲೇ ಈ ದುರ್ಗುಣವನ್ನು ಕಟ್ಟಿಕೊಂಡರು."

"ಆದರೆ ಅನ್ಯರಿಂದಲಾಗಿ ಹಾಳು ಅಭ್ಯಾಸ ಕಟ್ಟಿಕೊಂಡರಲ್ಲವೇ?"

"ಅದಕ್ಕಾಗಿಯೇ ಸದಾ ಒಳ್ಳೆಯವರ ಸಹವಾಸ ಮಾಡಬೇಕು ಎನ್ನುತ್ತಾರೆ. ಅಜ್ಞಾನಿಯ ಒಡನಾಟ ಕಲ್ಲ ಹೊತ್ತ ಹಾಗೆ ಎನ್ನುತ್ತಾರಲ್ಲವೇ?

ಹೂವಿನ ಒಡನಿದ್ದು ನಾರು ಮುಡಿಯನ್ನು ಸೇರುವ ಹಾಗೆ ಸಜ್ಜನರ ಒಡನಿದ್ದರೆ ಗೌರವ ದೊರೆಯುವುದು. ಅಲ್ಪರ ಸಂಗ ಅಭಿಮಾನ ಭಂಗ ಎಂಬ ಮಾತಿದೆಯಷ್ಟೆ. ಸಂಸರ್ಗ ತುಂಬಾ ಪರಿಣಾಮವನ್ನುಂಟುಮಾಡುವುದು."

"ಹೌದಣ್ಣಾ ನಮಗೆ ಆ ಪದ್ಯವನ್ನು ಮೊನ್ನೆ ಮಾಸ್ತ್ರು ಕಲಿಸಿದ್ದಾರೆ. ನನಗೆ ಆ ಪದ್ಯ ಬಾಯಿಪಾಠ ಆಗಿದೆ—ಬಲ್ಲವರ ಒಡನಾಟ ಬೆಲ್ಲವನ್ನು ಮೆದ್ದಂತೆ । ಅಲ್ಲದ್ದನಹುದೆಂಬ ಅಜ್ಞಾನಿಯೊಡನಾಟ । ಕಲ್ಲ ಹೊತ್ತಂತೆ ಸರ್ವಜ್ಞ—ಇದು ಸರಿಯಲ್ಲವೇ?"

"ಹೌದು. ಸಿಗರೇಟಿನ ಚಟ ಕಟ್ಟಿಕೊಂಡ ಅವರು ಸಿಗರೇಟಿನ ಬದಲಾಗಿ ಟೊಳ್ಳು ಮರದ ಕೋಲನ್ನು ಉರಿಸಿ ಹೊಗೆಬಿಡುತ್ತಿದ್ದರಂತೆ."

"ಅದೇಕೆ? ಅದು ಸಿಗರೇಟಿಗಿಂತ ರುಚಿಯೇ?"

"ರುಚಿಯೇನು? ಸಿಗರೇಟು ಸಿಕ್ಕದಾಗ ಹಾಗೆ ಮಾಡುತ್ತಿದ್ದರು. ಸಿಗರೇಟು ಸೇದುವುದೂ ಒಂದು ಆಟವೆಂದು ಅವರು ಭಾವಿಸಿದ್ದರು."

"ಆದರೆ ಅದು ಹೆತ್ತವರಿಗೆ ಗೊತ್ತಿರಲಿಲ್ಲವೇ?"

"ಇಲ್ಲ, ಹೆತ್ತವರಿಗರಿಯದಂತೆ ಈ ಕೆಲಸ ಮಾಡಬೇಕಾಗಿತ್ತು. ದಿನ ಕಳೆದಂತೆ ಸಿಗರೇಟು ತೆಗೆಯಲೂ ಮನಸ್ಸಾಯಿತು. ಅದಕ್ಕೆ ಹಣ ಅವರಲ್ಲಿರಲಿಲ್ಲ"

"ಹಣಕ್ಕೇನು ಮಾಡಿದರು?"

"ಕೆಲಸದವನ ಕಿಸೆಯಿಂದ ಕಾಸು ಕದ್ದರು."

"ಕೆಲಸದವನ ಕಿಸೆಯಿಂದ ಕದ್ದರೇ?"

"ಹೌದು ಕೆಟ್ಟ ಚಾಳಿ ಅಂಟಿಕೊಂಡಿತೆಂದರೆ ಮತ್ತೆ ಕೇಳಬೇಕೆ? ಮಾಡಬಾರದ್ದೆಲ್ಲ ತನ್ನಿಂದ ತಾನೇ ಅಭ್ಯಾಸವಾಗುವುದು. ಇದರಿಂದಲಾಗಿ ಒಮ್ಮೆ ಆತ್ಮಹತ್ಯೆ ಮಾಡಲು ಯತ್ನಿಸಿದರಂತೆ."

"ಆತ್ಮಹತ್ಯೆ! ಯಾರು ತಡೆದರು?"

"ಯಾರೂ ತಡೆಯಲಿಲ್ಲ. ನಮ್ಮಜ್ಜನೂ ಸಿಗರೇಟಿನ ಗೆಳೆಯರೂ ಸಿಗರೇಟು ಸೇದಬಾರದೆಂಬ ತಂದೆ ತಾಯಿಗಳ ನಿರ್ಬಂಧದಲ್ಲಿದ್ದು ಬಾಳು

ವುದಕ್ಕಿಂತ ಸಾಯುವುದೇ ಲೇಸೆಂದು ವಿಷ ತಿನ್ನುವ ಯೋಚನೆ ಮಾಡಿದರು. ಕಾಯನ್ನು ತಿಂದರೆ ಸಾಯುವುದೆಂದು ಅವರಿಗಾರೋ ಹೇಳಿದ್ದರಂತೆ. ಅಂತೆಯೇ ಅದನ್ನು ಶೇಖರಿಸಿ ತಿಂದು ಸಾಯಲು ಯತ್ನಿಸಿದರು. ಅಷ್ಟರಲ್ಲೇ ತಿಂದೊಡನೆ ಸಾಯದೆ ಇದ್ದರೋ? ಸತ್ತು ಮಾಡುವುದೇನು? ಇದರಿಂದ ಏನು ಫಲ ಎಂದು ಯೋಚನೆ ಬಂದು ಅದರಿಂದ ವಿಮುಖರಾದರು."

"ವಿಚಿತ್ರವೇ ಆಗಿದೆ ನಮ್ಮಜ್ಜನ ಕತೆ."

"ನಿಜವಾಗಿಯೂ ವಿಚಿತ್ರವಾದುದು. ಅನುಭವ ಪೂರ್ಣವಾದ ಕತೆ ಅವರದು. ಆ ಬಳಿಕ ಈ ರೀತಿ ಹೆತ್ತವರಿಗೆ ತಿಳಿಯದಂತೆ ಸೇದುವುದಕ್ಕಿಂತ ಸೇದದಿರುವುದೇ ಲೇಸೆಂದು ಆ ಅಭ್ಯಾಸವನ್ನು ಬಿಟ್ಟರು. ದೊಡ್ಡವರಾದಾಗ ಅದರಿಂದ ಆರೋಗ್ಯಕ್ಕೆ ಹಾನಿಯಿದೆ. ಅದು ಅಮಲು ಪದಾರ್ಥವಾದ್ದರಿಂದ ಅದನ್ನು ಸೇವಿಸಬಾರದೆಂದು ತಿಳಕೊಂಡರು."

"ಅಣ್ಣಾ! ಆದರೆ ನಮ್ಮ ಕಾಳಪ್ಪ ಕಳ್ಳುತ್ತಿರಬಹುದಲ್ಲವೇ? ಇವನ ಖರ್ಚೇನು? ಅವನು ಬೀಡಿ ಸಿಕ್ಕದಿದ್ದರೆ ಕಾಗದದಲ್ಲಿ ಹೊಗೆಸೊಪ್ಪಿನ ಸುರುಳಿ ಮಾಡಿ ಸೇದಿದರೂ ಆಗುತ್ತದೆ ಎನ್ನುತ್ತಾನೆ."

"ಶಾಲಾ ಮಕ್ಕಳು ಅರಿವಿಲ್ಲದೆ ಮಾಡುವ ಕೆಲಸವೇ ಇದು. ದುರ್ಗುಣ ಬೇಗನೆ ಅಂಟಿಕೊಳ್ಳುವುದು. ಇಂದಿನ ಶಾಲಾ ಮಕ್ಕಳು ಕೆಟ್ಟ ಚಾಳಿಗಳಿಗಾಗಿ ಎಷ್ಟು ಹಣ ಹಾಳು ಮಾಡುವುದಿಲ್ಲ."

"ಅಣ್ಣಾ, ಹೌದು. ಎಷ್ಟೋ ಮಂದಿ ಹುಡುಗಿಯರ ಹಾಗೆ ಪೌಡರ್ ಸ್ನೋ ಹಾಕಿ ಬರುತ್ತಾರೆ. ಸೆಂಟ್ ಉಜ್ಜಿಕೊಳ್ಳುತ್ತಾರೆ."

"ಎಲ್ಲಾ ಹುಚ್ಚು. ಶಾಲೆ ಎಂದರೆ ಮದುವೆ ಮನೆಯೇನು? ಶಾಲೆಯೆಂದರೆ ಒಂದು ದೇವಸ್ಥಾನ. ಅಲ್ಲಿ ಮಕ್ಕಳು ಕೂಡಿ ಆಡಿ ಕಲಿತು ಸದ್ಗುಣಗಳನ್ನು ಅಭ್ಯಾಸ ಮಾಡಬೇಕು. ತಪ್ಪು ಮಾಡದ ವ್ಯಕ್ತಿಯಿಲ್ಲ; ಅದನ್ನು ತಿದ್ದಿ ಸರಿಗೊಳಿಸಿ ಆದರ್ಶನಾಗರಿಕರೆನಿಸಿ ಬಾಳಬೇಕು. ನಮ್ಮ ಗಾಂಧಿ ಅಜ್ಜ ಎಳೆತನದಲ್ಲಿ ಅರಿಯದೆ ತಪ್ಪು ಮಾಡಿದ್ದಾರೆ. ಆದರೆ ಅವರು ತಮ್ಮ ಪ್ರತಿಯೊಂದು ಸಣ್ಣ ತಪ್ಪುಗಳನ್ನೂ ಬಿಡದೆ ತಿದ್ದಿಕೊಂಡು ವಿಶ್ವಕ್ಕೇ

ಆದರ್ಶರಾದರು. ಅವರು ಎಳೆತನದಲ್ಲಿ ಅರಿಯದೆ ಮಾಡಿದ ತಪ್ಪಿಗಾಗಿಯೂ ತುಂಬಾ ಮರುಗುತ್ತಿದ್ದರು. ಪಶ್ಚಾತ್ತಾಪಪಡುತ್ತಿದ್ದರು. ತಮ್ಮಾ ಗಾಂಧಿ ಅಜ್ಜನಿಗೆ ಯಾವಾಗ ಮದುವೆಯಾಯಿತು ಗೊತ್ತೇ?"

"ಇಲ್ಲ ಕಲಿಯುವಾಗಲೇನು?"

"ಹೌದು, ಅವರು ಮೆಟ್ರಿಕ್ ಪರೀಕ್ಷೆ ಪಾಸಾಗುವ ಮೊದಲೇ ಅವರಿಗೆ ಒಬ್ಬ ಮಗ ಹುಟ್ಟಿದ್ದ."

"ಅವರಿಗೆ ಅದೇಕಣ್ಣ ಅಷ್ಟು ಚಿಕ್ಕವರಿರುವಾಗಲೇ ಮದುವೆ ಮಾಡಿದರು?"

"ಅಂದಿನ ಪದ್ಧತಿ ಹಾಗಿತ್ತು. ವೈಷ್ಣವ ಸಂಪ್ರದಾಯಿಗಳಾದ ಅವರಿಗೆ ಅವರ ಹದಿಮೂರನೆ ವಯಸ್ಸಿನಲ್ಲಿ ಅದೇ ಪ್ರಾಯದ ಕಸ್ತೂರಿ ಬಾ ಅವರೊಡನೆ ಮದುವೆಯಾಯಿತು."

"ಇಷ್ಟು ಚಿಕ್ಕವರಿರುವಾಗ ಮದುವೆ ಮಾಡುವುದು ಅನ್ಯಾಯವಲ್ಲವೇ?"

"ಪಾಪ! ಮದುವೆಯಾಗುವ ಹೊತ್ತಿಗೆ ನಮ್ಮಜ್ಜನಿಗೆ ಮದುವೆಯೆಂದರೇನೆಂದೇ ತಿಳಿದಿರಲಿಲ್ಲ. ತನಗೆ ಆಡುವುದಕ್ಕೆ ಒಬ್ಬಳು ಪುಟ್ಟ ಹುಡುಗಿ ಸಿಕ್ಕುತ್ತಾಳೆ; ಮದುವೆಗಾಗಿ ಒಳ್ಳೆಯ ಬಟ್ಟೆಬರೆ ತರುತ್ತಾರೆ. ಬೇಂಡು ವಾದ್ಯ ತರಿಸುತ್ತಾರೆ; ತಿಂಡಿತಿನಸು ಮಾಡುತ್ತಾರೆ; ಬಹಳ ಗೌಜಿ, ಎಂದಿಷ್ಟೇ ತಿಳುವಳಿಕೆ ಅವರಿಗಿದ್ದಿತು. ಗಂಡನ ಜವಾಬ್ದಾರಿ ಏನಿದೆ? ಹೆಂಡತಿಯ ಕರ್ತವ್ಯ ಯಾವುದು? ಇದೊಂದೂ ಅರಿಯದು."

"ನಮ್ಮ ಅಜ್ಜ ಹೇಗೆ ಒಪ್ಪಿ ಬಿಟ್ರೋ? ಅವರಿಗೆ ನಾಚಿಕೆ ಆಗಲಿಲ್ಲವೇ?"

"ಹೆತ್ತವರ ಮಾತನ್ನು ಮೀರುವುದು ಅಸಾಧ್ಯ ತಾನೆ. ನಾಚಿಕೆಯೇನೋ ಬಹಳವಾಗಿ ಇತ್ತಂತೆ. ಕಸ್ತೂರಿ ಬಾ ಅವರ ಮುಖ ಕೂಡ ಸರಿಯಾಗಿ ನೋಡುತ್ತಿರಲಿಲ್ಲ. ಮಾತಂತೂ ಇಲ್ಲವೇ ಇಲ್ಲ."

"ಮದುವೆ ಆಗಿ ಶಾಲೆಗೆ ಹೋದಾಗ ಒಂದಿಗಿರುವ ಮಕ್ಕಳು ನಗಲಿಲ್ಲವೇನಣ್ಣಾ?"

"ನಕ್ಕಿರಬಹುದು. ನಕ್ಕರೂ ಮಾಡುವುದೇನು? ಅವರ ವಿದ್ಯಾಭ್ಯಾಸಕ್ಕೂ ಅದು ಸ್ವಲ್ಪ ತೊಂದರೆ ಕೊಟ್ಟಿತೆಂದು ಅವರೇ ಹೇಳಿದ್ದಾರೆ. ಅವರು ಕಲಿಯುತ್ತಿರುವಾಗ ಇನ್ನೊಬ್ಬ ಗೆಳೆಯ ಸಿಕ್ಕಿದ್ದನಂತೆ?"

"ಅವನೂ ನಮ್ಮ ಗಾಂಧಿ ಅಜ್ಜನನ್ನು ಕೆಟ್ಟ ಮಾರ್ಗಕ್ಕೆಳೆದನೇ?"

"ಅವನನ್ನೇ ದೂರಿ ಏನು ಫಲ? ಗಾಂಧಿ ಅಜ್ಜ ಮುಖ್ಯವಾಗಿ ಜಾಗ್ರತೆ ವಹಿಸಿದುದು ಸಾಕಾಗಲಿಲ್ಲ. ಆತನೊಡನೆ ವ್ಯವಹಾರ ಬೇಡ; ಅವನ ಸಂಸರ್ಗ ಬಿಟ್ಟುಬಿಡೆಂದು ತಾಯಿತಂದೆಗಳು ಹೇಳಿದ್ದರೂ ಗಾಂಧೀಜಿ ಆ ಮಾತನ್ನು ಲೆಕ್ಕಿಸಲಿಲ್ಲ. ಗಾಂಧೀಜಿ ಹಾವುಗಳನ್ನು ಕಂಡರೆ ಹೆದರುತ್ತಿದ್ದರೆಂದೆನಲ್ಲವೇ? ಅವರ ಆ ಗೆಳೆಯ 'ತಾನು ಹಾವು ಭೂತಗಳಿಗೆ ಹೆದರುವುದಿಲ್ಲ. ಕತ್ತಲಲ್ಲಿ ಎಲ್ಲಿಂದೆಲ್ಲಿಗೂ ಹೋಗಬಲ್ಲೆ' ಎನ್ನುತ್ತಿದ್ದನಂತೆ"

"ಆದರೆ ಅವನು ಬಹಳ ಧೈರ್ಯಶಾಲಿಯೇ?"

"ಆತನಿಗಿಂತ ಅವನಲ್ಲಿ ಧೈರ್ಯ ಕಂಡುಬರುತ್ತಿತ್ತಂತೆ. ದೇಹದಲ್ಲೂ ಗಾಂಧಿ ಅಜನಿಗಿಂತ ಗಟ್ಟಿಮುಟ್ಟಿನವನಂತೆ. ಯಾವಾಗಲೂ ಆತ ಗಾಂಧೀಜಿಯೊಡನೆ ಮಾಂಸ ತಿಂದವರು ಧೈರ್ಯವಂತರೂ ಸಾಹಸಿಗಳೂ ಆಗುತ್ತಾರೆ. ತಾನು ಚೆನ್ನಾಗಿ ಮಾಂಸ ತಿನ್ನುತ್ತಿರುವುದರಿಂದ ಧೈರ್ಯಶಾಲಿಯಾಗಿರುವೆ. ಗಟ್ಟಿಮುಟ್ಟಾಗಿ ಬೆಳೆದಿರುವೆ. ಎಲ್ಲಿಂದೆಲ್ಲಿಗೂ ಓಡಬಲ್ಲೆ; ಮಾಂಸ ತಿಂದು ಮದ್ಯ ಕುಡಿಯುತ್ತಿರುವುದರಿಂದಲೇ ಪಾಶ್ಚಾತ್ಯರು ಸಾಹಸಿಗಳಾಗಿ ನಮ್ಮನ್ನಾಳುತ್ತಿದ್ದಾರೆ—ಎಂದು ಬೋಧಿಸುತ್ತಿದ್ದನಂತೆ."

"ಅದನ್ನು ನಂಬಿದರೇ?"

"ನಂಬಿದರು. ಅಷ್ಟು ಸಣ್ಣ ದೇಶದವರು ನಮ್ಮ ಸಂಪೂರ್ಣ ಹಿಂದೂಸ್ಥಾನವನ್ನಾಳಲು ಆ ಕೆಚ್ಚಿಗೆ ಮಾಂಸ ತಿನ್ನುವುದೇ ಕಾರಣವಿರಬೇಕು. ಹಿಂದುಸ್ಥಾನದ ಜನರೆಲ್ಲಾ ಮಾಂಸ ತಿನ್ನ ತೊಡಗಿದರೆ ನಮ್ಮ ದೇಶ ಸ್ವತಂತ್ರವಾಗಬಹುದೆಂದು ಯೋಚಿಸಿದರಂತೆ."

"ಆದರೆ ಹಿಂದುಸ್ಥಾನ ಸ್ವತಂತ್ರವಾಗಬೇಕು ತಾನು ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕು ಎಂಬ ಯೋಚನೆ ಅಂದೇ ಅವರಲ್ಲಿದ್ದಿತೇ?"

"ಆ ಭಾವನೆಯು ಅಂಕುರಸ್ಥಿತಿ ಅದು ಎನ್ನಬಹುದು. ಇದೇ ಯೋಚನೆಯಿಂದ ದೊಡ್ಡವನಾದ ಮೇಲೆ ಇಡೀ ಹಿಂದೂಸ್ಥಾನದ ಮಕ್ಕಳೆಲ್ಲಾ ಮದ್ಯ ಕುಡಿಯುವಂತೆಯೂ ಮಾಂಸ ತಿನ್ನುವಂತೆಯೂ, ಮಾಡಬೇಕೆಂದು ಅವರು ಯೋಚಿಸಿದರಂತೆ. ಅವರ ಆ ಕಲ್ಪನೆ ಸತ್ಯವಾಗಿರದೆ ಶಾಶ್ವತವಾಗಿ ಉಳಿಯಲಿಲ್ಲ"

"ಗಾಂಧಿ ಅಜ್ಜನ ಈ ಯೋಚನೆ ನೆನೆದರೆ ನಗು ಬರುತ್ತದಣ್ಣಾ!"

"ಮಕ್ಕಳ ಯೋಚನೆಯೇ ಹಾಗೆ! ಕೆಲವೊಮ್ಮೆ ತಪ್ಪಿಬೀಳುತ್ತಾರೆ. ತಪ್ಪಿದರೆ ತಿದ್ದಿಕೊಳ್ಳುವುದು ಅವರ ಧರ್ಮ"

"ಹುಟ್ಟಿದ ಮೇಲೆ ಮಾಂಸ ತಿನ್ನದ ಅವರಿಗೆ ಅದು ಹೇಗೆ ಒಗ್ಗಿತಪ್ಪಾ!"

"ಒಗ್ಗಲಿಲ್ಲ. ಗೆಳೆಯನು ಅವರನ್ನು ಗುಪ್ತ ಸ್ಥಳಕ್ಕೆ ಕರೆದುಕೊಂಡು ಹೋಗಿ ತಿನ್ನಲಿತ್ತನಂತೆ. ಅದು ಅವರಿಗೆ ಅಸಹ್ಯವಾಗಿತ್ತು. ಏನೋ ಒಂದು ವಿಧದ ಕೊಳೆತ ಮಾಂಸದಂತೆ ನಾತ ಬರುತ್ತಿತ್ತಂತೆ. ಆದರೂ ಬಲಹೀನನಾಗಿರುವ ತಾನು ಬಲಶಾಲಿಯಾಗಬಹುದು, ಧೈರ್ಯ ಬರಬಹುದು ಎಂಬ ಆಶೆಯಿಂದ ಹೇಗೂ ತಿಂದುಬಿಟ್ಟರು."

"ಅಯ್ಯೋ! ಅವರ ಅವಸ್ಥೆಯೇ?"

"ಮಾಂಸ ತಿಂದ ದಿನ ಗಾಂಧೀಜಿಗೆ ನಿದ್ದೆ ಬೀಳಲೇ ಇಲ್ಲವಂತೆ. ಜಾತೀಯ ಪದ್ಧತಿಗೆ ಅದೆಷ್ಟೋ ವಿರೋಧ! ಅಪ್ಪ ಅಮ್ಮನನ್ನು ಮೋಸ ಮಾಡಿ ಮಾಂಸ ತಿಂದಿಯಲ್ಲಾ ಕಳ್ಳ! ಎಂದು ಅವರ ಅಂತರಾತ್ಮ ಎನ್ನುತ್ತಿತ್ತು. ಅಂದು ಅವರ ಮನಸ್ಸಿಗೆ ಎಳ್ಳಷ್ಟೂ ಶಾಂತಿಯಿರಲಿಲ್ಲ. ತಿಂದುದು ಆಡಿನ ಮಾಂಸ. ಹೊಟ್ಟೆಯೊಳಗಿಂದ ಆಡಿನಮರಿ ಬೇಬೇ ಎಂದು ಕೂಗುವಂತೆ ಅವರಿಗೆ ಭಾಸವಾಯಿತು. ಪಾಪ ಅದಕ್ಕೆಷ್ಟು ನೋವಾಗಿರಬಹುದು! ಅದು ಎಷ್ಟು ಶಾಪ ಕೊಟ್ಟಿತೋ ಏನೋ ಇತ್ಯಾದಿ ಯೋಚನೆಗಳು ಅವರ ತಲೆಯನ್ನೇ ತಿನ್ನ ತೊಡಗಿದುವಂತೆ."

"ಆದರೆ ಅಂದಿನಿಂದ ಒಳ್ಳೆಯ ಬುದ್ಧಿ ಬಂತೇ?"

"ಸಂಪೂರ್ಣ ಬಂದಿರಲಿಲ್ಲ. ಹೆತ್ತವರಿಗೆ ತಿಳಿಯದೆ ತಿಂದು ವಂಚಿಸಬಾರದೆಂದು ಅವರಿಗೆ ಕಂಡಿತು. ಅದೇ ಅವರನ್ನು ತಡೆಯಿತು."

"ಅಯ್ಯೋ ಅವರ ಗೆಳೆಯನೆಂಥಾ ದುಷ್ಟನೋ!"

"ಗಾಂಧೀಜಿ ಅಷ್ಟಕ್ಕೇ ಅವನ ಸಹವಾಸ ಬಿಡಲಿಲ್ಲ. ಅವರನ್ನು ವೇಶ್ಯೆಯರೆಡೆಗೂ ಕೊಂಡೊಯ್ದನಂತೆ. ಆದರೆ ಆ ಪಾಪ ಕಟ್ಟಿಕೊಳ್ಳಲು ದೇವರು ಅವರನ್ನು ಬಿಡಲಿಲ್ಲ. ಪಾಪಕರ್ಮಕ್ಕೆ ಅವರು ಬಲಿ ಬೀಳಲಿಲ್ಲ.

"ಅಬ್ಬಾ! ಕೆಟ್ಟವರ ಸಹವಾಸದ ಫಲವೇ!"

"ಗಾಂಧೀಜಿಯ ಅಣ್ಣನವರೂ ಅಲ್ಪರೊಂದಿಗಿದ್ದು ತಪ್ಪು ದಾರಿ ಹಿಡಿದು ಸಾಲ ಮಾಡಿದ್ದರಂತೆ. ರೂಪಾಯಿ ಇಪ್ಪತ್ತೈದು ಸಾಲವಿತ್ತಂತೆ. ಅಣ್ಣನ ಕೈಯಲ್ಲಿದ್ದ ಚಿನ್ನದ ಗಟ್ಟಿಬಳೆಯನ್ನು ಹಾಳು ಚಟಗಳಿಗೆ ಬಲಿ ಬಿದ್ದ ಗಾಂಧೀಜಿ ತುಂಡು ಮಾಡಿ ಮಾರಲು ಸಹಾಯಕರೇ ಆದರು."

"ಈ ಎಲ್ಲಾ ಕೆಲಸ ಅರಿಯದೇ ಸಾಗಬೇಕಲ್ಲವೇ?"

"ತಿಳಿದರೆ ಹೆತ್ತವರು ಬಿಡುವರೇ? ಹೆತ್ತವರಿಗೆ ಮಕ್ಕಳ ದುರ್ಗುಣ ಕಂಡು ಸಹಿಸಲಾರದೆ ಮರುಕ ಉಂಟಾಗುವುದಿಲ್ಲವೇ? ತಮ್ಮ ಜೀವನದ ಭಾವೀ ಕಲ್ಯಾಣದ ಅಮೃತರೂಪವೆಂದು ಭಾವಿಸುವ ಮಕ್ಕಳ ಕಲ್ಯಾಣವನ್ನು ಅವರು ಮರೆತು ಬಿಡುವರೇ? ಹಾಳು ಗೆಳೆಯನ ಸಹವಾಸ ತಾಯಿಯೂ ತಂದೆಯೂ ಬೇಡವೆಂದರು. ಎಳೆಯ ಹೆಂಡತಿ ಕಸ್ತೂರಿಬಾ ಕೂಡ ನಿಷೇಧ ಹೇಳಿದರು. ಅದೊಂದೂ ಅವರ ಚಿತ್ತಕ್ಕೆ ಸೇರಲಿಲ್ಲ."

"ಅಣ್ಣಾ! ಕಸ್ತೂರಿಬಾ ಏನು ಮಾಡುತ್ತಿದ್ದರು."

"ಮನೆಯಲ್ಲಿ ಸುಖವಾಗಿದ್ದರು. ಓದುಬರಹ ಅವರಿಗೆ ಬರುತ್ತಿರಲಿಲ್ಲ. ಗಾಂಧೀಜಿಯೇ ಕಲಿಸಿಕೊಟ್ಟರು. ಮೊದಮೊದಲು ಹೆಂಡತಿಯ ವಿಷಯದಲ್ಲಿ ಅನಾದರ ತೋರಿದ್ದರೂ ತಾನು ಮಾಡುವುದು ತಪ್ಪೆಂದು ಅವರಿಗೆ ಮತ್ತೆ ತಿಳಿಯಿತು. ಗಾಂಧೀಜಿ ಮೊದಲು ವಿದ್ಯಾಭ್ಯಾಸದಲ್ಲಿ ಅಷ್ಟು ಆದರ ತೋರ ದಿದ್ದರೂ ಮುಂದೆ ಚುರುಕಾಗಿ ತರಗತಿಯಲ್ಲಿ ಒಂದನೆಯಾಗಿ ಬರುತ್ತಿದ್ದರು. ವರ್ಷವರ್ಷವೂ ಬಹುಮಾನ ದೊರೆಯುತ್ತಿತ್ತು. ಚುರುಕು ಹುಡುಗ ನಾಗಿರುವ ಅವರಿಗೆ ವಿದ್ಯಾರ್ಥಿ ವೇತನವೂ ದೊರೆಯುತ್ತಿತ್ತು. ಶಾಲೆಗೆ ಹೋಗುತ್ತಿರುವಾಗ ಅಸೌಖ್ಯದಲ್ಲಿದ್ದ ತಂದೆಯ ಸೇವೆಗೆ, ಶಾಲೆ ಬಿಟ್ಟು ಓಡಿ

ಬರುತ್ತಿದ್ದರು. ಕ್ಲಾಸಿಗೆ ತಪ್ಪದೆ ಹಾಜರಾಗುತ್ತಿದ್ದರು. ಅಧ್ಯಾಪಕರಿಗೆಲ್ಲಾ ಅವರ ಮೇಲೆ ಬಹು ಅಕ್ಕರೆ."

"ಅಣ್ಣಾ! ಬಳಿ ಮಾರಿದ್ದಕ್ಕೆ ಅವರನ್ನು ಹೆತ್ತವರು ಗದರಿಸಲಿಲ್ಲವೇ?"

"ಇಲ್ಲ. ಗಾಂಧೀಜಿಗೆ ಒಡನೆ ತಾನು ಮಾಡಿದುದು ಅನ್ಯಾಯವೆಂದು ತಿಳಿಯಿತು. ತಂದೆಯವರಲ್ಲಿ ತಾನು ಮಾಡಿದ ತಪ್ಪಿಗಾಗಿ ಕ್ಷಮೆ ಕೇಳ ಬೇಕೆಂದು ಕಂಡಿತು. ಎದುರು ನಿಂತು ಕೇಳಲು ಧೈರ್ಯವಿಲ್ಲ. ಕೇಳ ದಿರಲು ಮನಸ್ಸೊಪ್ಪದು. ತಪ್ಪಿಗಾಗಿ ಕ್ಷಮೆ ಕೇಳಿಕೊಳ್ಳಲೇ ಬೇಕು. ತಪ್ಪನ್ನು ತಿದ್ದಬೇಕು. ಹೆತ್ತವರಿಗೆ ತಿಳಿಸದೆ ಇದ್ದರೆ ಪಾಪಿಯಾಗುವೆ ಎಂಬ ಯೋಚನೆಯಿಂದ ತುಂಬಾ ವ್ಯಥೆಯಾಯಿತು. ತಂದೆಯವರು ತಿಳಿಸಿದಾಗ ಎಷ್ಟು ರೇಗುವರೋ ಎಂಬ ಭಯ ಕಾಡಿ ಪೀಡಿಸುತ್ತಿತ್ತು. ಕೊನೆಗೆ ತಾನು ಮಾಡಿದ ತಪ್ಪನ್ನೆಲ್ಲಾ ಕಾಗದದಲ್ಲಿ ಬರೆದು ಕ್ಷಮೆ ಕೇಳಿದ ಪತ್ರವನ್ನು ಅಸೌಖ್ಯದಲ್ಲಿ ಮಲಗಿರುವ ತಂದೆಯವರ ಕೈಗಿತ್ತರು."

"ಅಣ್ಣಾ! ನಮ್ಮಜ್ಜನ ಬುದ್ಧಿ ಎಷ್ಟು ಬೇಗನೆ ಪರಿವರ್ತನೆಗೊಂಡಿತು!"

"ತಪ್ಪನ್ನು ತಿದ್ದುವವರ ಲಕ್ಷಣವೇ ಇದು. ಉತ್ತಮರು ತಮ್ಮ ತಪ್ಪಿ ಗಾಗಿ ಮರುಗಿ ಕ್ಷಮೆ ಕೇಳುವರು, ತಪ್ಪನ್ನು ತಿದ್ದಲು ಯತ್ನಿಸುವರು. ತಮ್ಮ ತಪ್ಪಿಗೆ ತಾವೇ ಪ್ರಾಯಶ್ಚಿತ್ತಗೈಯುವುದು ಸಜ್ಜನರ ಲಕ್ಷಣ. ಗಾಂಧೀ ಜಿಯ ತಂದೆ—ಪತ್ರವನ್ನು ನೋಡಿ—ಸಿಟ್ಟುಗೊಳ್ಳಲಿಲ್ಲ, ಗದರಿಸಲಿಲ್ಲ, ಬೈಯ್ಯಲಿಲ್ಲ, ಹೊಡೆಯಲಿಲ್ಲ, ಕಣ್ಣೀರಿಳಿಸಿ ಅತ್ತರು. ಗಾಂಧೀಜಿಗೂ ಅವರ ದುಃಖ ಕಂಡು ತಡೆಯದಾಯಿತು. ತಂದೆಯ ಚರಣವನ್ನಪ್ಪಿ ಅತ್ತು ಕಣ್ಣೀರಿ ನಿಂದ ಅವರ ಪಾದವನ್ನೇ ತೊಯ್ದರು."

"ಅಣ್ಣಾ! ಇಂಥಾ ಮಕ್ಕಳು ಇದ್ದಾರೇನು?"

"ಈಗ ಇದ್ದರೂ ಇರಬಹುದು. ನಮ್ಮ ಭಾರತದಲ್ಲಿ ಸಾವಿರಾರು ಮಂದಿ ಗಾಂಧೀಜಿಯಂಥಾ ಮಕ್ಕಳು ಹುಟ್ಟಬೇಕು. ನಮ್ಮಜ್ಜನಂಥಾ ಸದ್ಬುದ್ಧಿ ಎಲ್ಲಾ ಮಕ್ಕಳಿಗೆ ಬರಲಿ. ತಂದೆ ತನಗಾಗಿ ಎಷ್ಟು ಮರುಗು ತ್ತಿದ್ದಾರೆ ಎಂಬುವರ ಅರಿವು ಅಂದವರಿಗಾಯಿತು. ಕೋಮಲ ಸ್ವಭಾವ ಎಂಥವನನ್ನೂ ಸೋಲಿಸಬಹುದು. ಎಂಥಾ ತಪ್ಪನ್ನೂ ತಿದ್ದಬಹುದು.

ವಿಶ್ವವನ್ನೇ ಗೆಲ್ಲುವ ಸಾಮರ್ಥ್ಯ ಶಾಂತಿಗಿದೆ ಎಂಬ ತಿಳುವಳಿಕೆ ಗಾಂಧೀಜಿಗೆ ಇದರಿಂದಲೇ ಉಂಟಾಯಿತು."

"ಅಣ್ಣಾ! ನಮ್ಮ ಅಜ್ಜ ಹೆಜ್ಜೆ ಹೆಜ್ಜೆಗೂ ಅನುಭವ ಕಟ್ಟಿಕೊಂಡರಲ್ಲವೇ?"

"ಇಂಥಾ ಅನುಭವಗಳಿಂದ ಅರಿವುಗೊಂಡು ಅವರು ಪವಿತ್ರ ಜೀವನಕ್ಕೆ ಕಾರಣರಾದರು. ಅಸೌಖ್ಯದಲ್ಲಿರುವ ತಂದೆಯವರ ಶುಶ್ರೂಷೆ ಗಾಂಧೀಜಿಗೆ ಮೆಚ್ಚಿನ ಕೆಲಸವಾಗಿತ್ತು. ಮಲಗಿದ್ದ ತಂದೆಯ ಕಾಲನ್ನು ಮಧ್ಯರಾತ್ರಿಯ ತನಕವೂ ಒದನ್ನು ತೀರಿಸಿ ಉಜ್ಜುತ್ತಿರುವುದೆಂದರೆ ಬಹು ಇಷ್ಟದ ಕೆಲಸವಾಗಿತ್ತು. ಶ್ರವಣಕುಮಾರನ ಕತೆ ಕೇಳಿದುದೇ ಇದಕ್ಕೆ ಕಾರಣವಾಯಿತು."

"ಅಣ್ಣಾ! ರಾಮನ ಹಾಗೆ ಪಿತೃಭಕ್ತಿ ಅವರದಲ್ಲವೇ?"

"ರಾಮಭಕ್ತರಾದ ಅವರಲ್ಲಿ ಅಂಥಾ ಮನೋವೃತ್ತಿಯು ಇದ್ದಿತೆಂಬುದರಲ್ಲಿ ಸಂದೇಹವೇಕೆ? ಗಾಂಧೀಜಿ ಹೈಸ್ಕೂಲಿನಲ್ಲಿ ಕಲಿಯುತ್ತಿರುವಾಗಲೇ ಭಗಂದರ ರೋಗಪೀಡಿತರಾಗಿ ಅವರ ತಂದೆ ಸ್ವರ್ಗಸ್ಥರಾದರು. ಭಗಂದರ ರೋಗಪೀಡಿತರಾದ ಅವರ ಸನಿಯದಲ್ಲೇ ಕುಳಿತು ಅವರಿಗೆ ಬೇಕಾದ ಶುಶ್ರೂಷೆ ಮಾಡುತ್ತಾ ಕಾಲೊರಸುತ್ತಾ ಇದ್ದರೂ ಸಾವಿನ ಹೊತ್ತಿಗೆ ಅವರ ಸನಿಯದಲ್ಲಿರಲಾಗಲಿಲ್ಲವೆಂಬ ದುಃಖ ಅವರಲ್ಲಿ ಆ ಜೀವ ಉಳಿಯಿತು."

"ಅವರು ಎಲ್ಲಿಗೆ ಹೋಗಿದ್ದರಣ್ಣಾ?"

"ಎಲ್ಲಿಗೂ ಹೋಗಿರಲಿಲ್ಲ. ರಾತ್ರೆ ಹನ್ನೊಂದರ ತನಕ ತಂದೆಯ ಕಾಲೊರಸುತ್ತಾ ಕುಳಿತಿದ್ದರು. ಅಣ್ಣನನ್ನು ನೋಡಲು ಬಂದ ಅವರ ಚಿಕ್ಕಪ್ಪ ನೀನು ಹೋಗಿ ಮಲಗೆಂದು ಹೇಳಲು ಅವರು ಹೊರಟು ಶಯನ ಗೃಹವನ್ನು ಸೇರಿದರು. ಅವರು ಅಲ್ಲಿಂದ ಹೊರಟು ಹೋದ ಐದಾರು ನಿಮಿಷಗಳಲ್ಲೇ ಅವರ ಪೂಜ್ಯಪಿತನ ಪ್ರಾಣವಾಯು ಹೊರಟು ಹೋಯಿತು. ಕಸ್ತೂರಿ ಬಾಯಿಯವರೊಡನೆ ಸರಸವಾಡುತ್ತಿದ್ದ ಅವರನ್ನು ಸೇವಕನು 'ಅಯ್ಯಾ! ಬಾಪುವಿಗೆ ಕಾಹಿಲೆ ಹೆಚ್ಚಾಗಿದೆ' ಎಂದು ಕರೆದನು. ಥಟ್ಟನೆದ್ದು— 'ಏನಾಯಿತು? ಎಂದು ಕೇಳಿದರು. "ಸ್ವರ್ಗಸ್ಥರಾದರು" ಎಂಬ ಉತ್ತರ

ದೊರೆಯಿತು. ಗಾಂಧೀಜಿಗೆ ಮರುಕ ತಡೆಯದಾಯಿತು. ಅಂದು ಗಾಂಧೀಜಿಗೆ ಹದಿನಾರು ವರುಷ"

"ಪಾಪ! ಅವರು ಚಿಕ್ಕವರಿರುವಾಗಲೇ ಹೀಗಾಯಿತೇ?!"

"ವಿಧಿಯಿಚ್ಛೆ, ಯಾರೇನು ಮಾಡುವರು? ತಾನು ಕಾಲೊರಸುತ್ತಿದ್ದರೆ ಚಿಕ್ಕಪ್ಪನ ಮಡಿಲಲ್ಲಿ ಪ್ರಾಣಬಿಡುವ ಬದಲು ತನ್ನ ಮಡಿಲಲ್ಲೇ ಇಹಲೋಕ ವ್ಯಾಪಾರ ಮುಗಿಸುತ್ತಿದ್ದರು. ಚಿಕ್ಕಪ್ಪನಿಗೆ ಅಣ್ಣನಲ್ಲಿ ಅಷ್ಟು ಭಕ್ತಿಯಿದ್ದುದರಿಂದ ಆ ಭಾಗ್ಯ ಅವರಿಗೆ ದೊರೆಯಿತು. ಪಾಪಿಯಾದ ತನಗೆ ದೊರೆಯದಾಯಿತು ಎಂದು ಮರುಗಿಕೊಂಡರು."

"ಅಣ್ಣಾ! ಗಾಂಧಿ ಅಜ್ಜ ಎಳೆವೆಯಲ್ಲೂ ಇಂಥಾ ಭಕ್ತಿಯುಕ್ತರಾದುದು ನನಗೆ ಆಶ್ಚರ್ಯವನ್ನೇ ಉಂಟುಮಾಡುತ್ತಿದೆ."

---

— ೩ —

"ತಮ್ಮಾ ನಿನಗೆ ಶಾಲೆಯಲ್ಲಿ ಪಾಠ ಹೇಳುವುದು ಯಾವ ಭಾಷೆಯಲ್ಲಿ?"

"ಕನ್ನಡದಲ್ಲಿ."

"ನಿನ್ನ ಪ್ರಥಮ ಭಾಷೆ ಯಾವುದು?"

"ಕನ್ನಡ."

"ಹಾಗಿದ್ದರೆ ಮೊದಲು ಇಂಗ್ಲೀಷೇ ಒಂದನೇ ಭಾಷೆಯಾಗಿತ್ತು. ಗಾಂಧೀಜಿ ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾದರು. ಅರ್ಥವಾಗದ ಆ ಇಂಗ್ಲೀಷು ಅವರಿಗೆ ಒಗ್ಗುತ್ತಿರಲಿಲ್ಲ. ಅದಕ್ಕೆ ತುದಿ ಬುಡ ಇದ್ದರೆ ತಾನೆ?"

"ಅಂದರೆ."

"ನೋಡು ತಮ್ಮಾ! ನಮ್ಮ ಭಾಷೆಯೆಷ್ಟು ಸರಳವಾಗಿ ಅದಿಲ್ಲ. ಬರೆಯುವುದೊಂದು ಓದುವುದು ಮತ್ತೊಂದು. ಆ ಭಾಷೆಯಲ್ಲಿ 'ಕುಞ್ಞಣ್ಣ' ಎಂದು ಹೇಗೆ ಬರೆಯಲಿ. ಕುನ್ನನ್ನ 'Kunnanha' ಎಂದು ಬರೆದು ಕುಞ್ಞಣ್ಣ ಎಂದು ಓದಬೇಕು ತಾನೆ! ತಮ್ಮಾ! ರಾಮ (Rama) ಎಂದು

ಇಂಗ್ಲೀಷಿನಲ್ಲಿ ಬರೆದುದನ್ನು ರವಾ ಎಂದರೂ ತಪ್ಪಿಲ್ಲವಲ್ಲಾ! ಅದಿರಲಿ. ಗಾಂಧೀಜಿಗೆ ಇಂಗ್ಲಿಷ್ ಮಾತನಾಡ ಬರುತ್ತಿರಲಿಲ್ಲ. ೧೮೮೭ನೇ ಇಸವಿ ಯಲ್ಲಿ ಅವರು ಮೆಟ್ರಿಕ್ ಪಾಸಾಗಿದ್ದರು. ಅವರ ತಂದೆ ಹಣವಂತರಲ್ಲ ವಾದ ಕಾರಣ ಅವರ ಮುಂದಿನ ವಿದ್ಯಾಭ್ಯಾಸಕ್ಕೂ ತುಂಬಾ ಕಷ್ಟವೇ ಆಯಿತು."

"ಆದರೆ ಗಾಂಧಿ ಅಜ್ಜ ಬಡವರೇನಣ್ಣ?"

"ಹೌದು."

"ಪಾಪ! ಆದರೆ ಹೇಗೆ ಅವರು ಬ್ಯಾರಿಸ್ಟರ್ ಕಲಿತರಣ್ಣಾ?"

"ತುಂಬಾ ಪ್ರಯಾಸದಿಂದಲೇ ಕಲಿತರು. ಗಾಂಧೀಜಿ ಏಳನೆ ವರ್ಷ ದಿಂದಲೇ ಪೋರ್ ಬಂದರದಿಂದ ರಾಜಕೋಟೆಗೆ ಬಂದಿದ್ದರು. ಬಡವ ರಾಗಿದ್ದರೂ ಅವರ ಹಿರಿಯರಿಗೆ ಕಲಿಸದಿರಲು ಮನಸ್ಸೊಪ್ಪಲಿಲ್ಲ. ಕಡಮೆ ಖರ್ಚಿನಲ್ಲಿ ಕಾಲೇಜು ವಿದ್ಯಾಭ್ಯಾಸ ಪೂರೈಸಲು ಭಾವನಗರದ ಶ್ಯಾಮಲ ದಾಸ್ ಕಾಲೇಜು ಯೋಗ್ಯವೆಂದು ಅಲ್ಲಿಗೆ ಕಳುಹಿಸಿ ಕೊಟ್ಟರು. ಅಲ್ಲಿನ ಪಾಠವನ್ನರಗಿಸಿಕೊಳ್ಳುವುದಕ್ಕೆ ಎಳೆ ಪ್ರಾಯದ ಗಾಂಧೀಜಿಗೆ ಸಾಧ್ಯವಾಗ ಲಿಲ್ಲ. ಅಧ್ಯಾಪಕರ ಒಂದೊಂದು ಭಾಷಣವೂ ಅವರಿಗರ್ಥವಾಗದೆ ಹೋ ಯಿತು. ನಿರುತ್ಸಾಹ ಕಂಡಿತು."

"ಮತ್ತೇನು ಮಾಡಿದರು?"

"ಬುದ್ಧಿ ಕುದುರದ ಗಾಂಧಿ ಅಜ್ಜ ಒಂದನೆಯ ಪರೀಕ್ಷೆಯಾದೊಡನೆ ಮನೆಯ ಹಾದಿ ಹಿಡಿದರು. ಅದೇ ಹೊತ್ತಿಗೆ ಗಾಂಧೀಜಿಯ ಕುಟುಂಬಕ್ಕೆ ಹಿತಚಿಂತಕರಾಗಿ ಸನ್ಮಿತ್ರರೆನಿಸಿಕೊಂಡಿದ್ದ 'ಮಾಧವಜಿ ದವೆ' ಎಂಬವರು ನಮ್ಮ ಗಾಂಧಿ ಅಜ್ಜನನ್ನು ಬ್ಯಾರಿಸ್ಟರ್ ಕಲಿಯಲು ಕಳುಹುವುದೇ ಲೇಸು. ಈ ಕಾಲೇಜು ಶಿಕ್ಷಣ ಬೇಡ. ಬ್ಯಾರಿಸ್ಟರ್ ಕಲಿಯಲು ಮೂರು ವರ್ಷಕ್ಕೆ ನಾಲ್ಕೈದು ಸಾವಿರ ರೂಪಾಯಿ ಸಾಕಾಗಬಹುದು ಎಂದು—ಅವರ ಅಣ್ಣ ನಿಗೂ ತಾಯಿಯವರಿಗೂ ಸಲಹೆ ಕೊಟ್ಟರು. ಆದರೆ ನಮ್ಮಜ್ಜನಿಗೆ ಡಾಕ್ಟರ ನಾಗಬೇಕು ಎಂಬ ಆಸೆಯಿತ್ತಂತೆ. ಅಜ್ಜ ಆ ಅಭಿಪ್ರಾಯವನ್ನು ತಿಳಿಸಿದರು.

"ಆದರೆ ಮತ್ತೇನಾಯಿತು?"

"ಅವರ ಅಣ್ಣ ಆದಕ್ಕೊಪ್ಪಲಿಲ್ಲ. ನಮ್ಮ ತಂದೆಗೂ ವಕೀಲನನ್ನಾಗಿ ಮಾಡಬೇಕೆಂದು ಆಸೆಯಿತ್ತು. ಹೆಣ ಕೊಯ್ಯುವುದು ನಮ್ಮ ಸಂಪ್ರದಾಯಕ್ಕೆ ತೀರ ವಿರೋಧ ಎಂದು ಹೇಳಿ ಗಾಂಧೀಜಿಯ ಮಾತಿಗೆ ಬೆಲೆ ಕೊಡಲಿಲ್ಲ. ಗಾಂಧೀಜಿಯ ತಾಯಿಗೆ ಸಣ್ಣ ಹುಡುಗನನ್ನು ಕಲಿಯಲಾಗಿ ಅಷ್ಟುದೂರ ಸಮುದ್ರದಾಚೆ ಕಳುಹುವುದು ಯೋಗ್ಯವೆಂದು ಕಾಣಲಿಲ್ಲ. ಮನಸ್ಸಿಲ್ಲದ ಅವರ ತಾಯಿ—ಎಷ್ಟಾದರೂ ಚಿಕ್ಕಪ್ಪನಿದ್ದಾನೆ. ಅವರ ಅನುಮತಿ ಪಡೆದೇ ಹೋಗಬಹುದೆಂದು ಹೇಳಿದರು. ಅವರ ಅಣ್ಣನಿಗೆ ಕಳುಹುವ ಯೋಚನೆಯೊಡನೆ ಹಣದ ಪ್ರಶ್ನೆಯೂ ಇದೇ ತಾನೆ. ತಾಯಿಯ ಸೂಚನೆಯಂತೆ ಪೋರ್ ಬಂದರಕ್ಕೆ ತೆರಳಿ ಚಿಕ್ಕಪ್ಪನನ್ನು ಕಂಡು ಪರಿಚಿತರಾದ ಲೆಲಿ ಸಾಹೇಬರ ಸಹಾಯವನ್ನು ಪಡೆಯಬಹುದೆಂದೆಣಿಸಿದರು. ಗಾಂಧೀಜಿ ಕಲಿಯುವುದಕ್ಕೆ ಅಪ್ಪಣೆ ಪಡೆಯಲಾಗಿ ಚಿಕ್ಕಪ್ಪನೆಡೆಗೆ ಹೊರಡಬೇಕಾಯಿತು."

"ಚಿಕ್ಕಪ್ಪ ಒಪ್ಪಿದರೇ?"

"ವಿಲಾಯಿತಿಗೆ ಹೋದರೆ ಅವರ ಧರ್ಮ ಕೆಟ್ಟು ಹೋದೀತೆಂಬ ಭಯ ಅವರಿಗುಂಟಾಯಿತು. ಬ್ಯಾರಿಸ್ಟರಾಗಿ ಬಂದವರೆಲ್ಲಾ ಐರೋಪ್ಯರಂತೆಯೇ ಇರುತ್ತಾರೆ. ಮಾಂಸ ತಿನ್ನುತ್ತಾರೆ, ಚುಟ್ಟ ಸೇದುತ್ತಾರೆ. ಅಂತಿರುವುದು ವೈಷ್ಣವ ಸಂಪ್ರದಾಯಕ್ಕೆ ವಿರೋಧ—ನಾಚಿಕೆಗೇಡು. ತನಗೆ ಮನಸ್ಸಿಲ್ಲ ಅಂದು ಬಿಟ್ಟರು. ಗಾಂಧೀಜಿ ಕಟ್ಟಿದ ಆಕಾಶ ಗೋಪುರವೆಲ್ಲಾ ಕುಸಿದು ಬಿದ್ದಂತಾಯಿತು."

"ಗಾಂಧೀಜಿಗೆ ಎಷ್ಟು ದುಃಖವಾಯಿತೋ ಏನೋ ಕಲಿಯಲಾಗಿ ತುಂಬಾ ಕಷ್ಟಪಡಬೇಕಾಯಿತಲ್ಲವೆ?"

"ಕಷ್ಟ ಪಟ್ಟವರಿಗೆ ತಾನೆ ವಿದ್ಯೆ ಬಂದೀತು. ಗಾಂಧೀಜಿ ಹೋಗಲೇ ಬಾರದು! ಕಲಿಯಲೇ ಬಾರದು ಎಂದು ಅವರು ಹೇಳಲಿಲ್ಲ. 'ಸಣ್ಣವನಾದ ನಿನ್ನನ್ನು ಸಮುದ್ರದಾಚೆ ತೆರಳೆಂದು ನಾನೆಂತು ಹರಸಿ ಕಳುಹಲಿ! ನನ್ನ ಅಪ್ಪಣೆಗಿಂತ ನಿನ್ನ ತಾಯಿಯ ಅಪ್ಪಣೆಯೇ ಪ್ರಧಾನ. ಅವರು ಒಪ್ಪಿದರೆ ನಾನೊಪ್ಪಿದಂತೆಯೇ ಸರಿ. ನಿನಗೆ ನನ್ನ ಆಶೀರ್ವಾದವಿದೆ. ಅವರ ಅಪ್ಪಣೆ ಪಡೆ' ಎಂದು ಗಾಂಧೀಜಿಯೊಡನೆಂದರು."

"ಅಣ್ಣಾ! ಅವರೇಕೆ ಹಾಗೆಂದರು."

"ಆಗ ಗಾಂಧೀಜಿ ಕಿರಿಯವರಲ್ಲವೇ? ನಮ್ಮ ದೇಶದಿಂದ ಇಂಗ್ಲೆಂಡಿಗೆ ತೆರಳಿದವರೆಲ್ಲಾ ತಮ್ಮ ನಡೆನುಡಿ ಆಚಾರವನ್ನೆಲ್ಲಾ ಮರೆತು ಬಿಡುತ್ತಿದ್ದರು. ಯುರೋಪಿನವರ ವೇಷವನ್ನೇ ಕಟ್ಟುತ್ತಿದ್ದರು.. ದೇವರನ್ನು ಅಲ್ಲಗಳೆಯುತ್ತಿದ್ದರು. ಅಲ್ಲಿನ ಬಿಳಿಬಣ್ಣದ ಹುಡುಗಿಯರಿಗೆ ಮನಸೋತು ಹಾಳಾಗುತ್ತಿದ್ದರು. ಸಣ್ಣ ಪ್ರಾಯದ ಅವರು ಅಲ್ಲಿಗೆ ಹೋದರೆ ಏನೆಲ್ಲಾ ಮಾಡುವರೋ ಎಂಬ ಭಯ ಅವರದು. ಅದರಲ್ಲೂ ಗಾಂಧೀಜಿಗೆ ಏನೂ ಅರಿಯದು. ಇಂಗ್ಲೀಷಿನಲ್ಲಿ ಮಾತನಾಡುವುದಂತೂ ಗಾಂಧೀಜಿಗೆ ಕಷ್ಟವಾಗಿಯೇ ಇತ್ತು. ಆಗ ಏನಾದರೂ ಮಾತನಾಡಬೇಕಿದ್ದರೆ ಒಂದೆರಡು ವಾಕ್ಯವೇ ಇರಲಿ ಅವನ್ನು ಬರೆದು ಬಾಯಿಪಾಠ ಮಾಡಿಕೊಳ್ಳುತ್ತಿದ್ದರಂತೆ."

"ಆದರೆ ಗಾಂಧೀಜಿ ಇಂಗ್ಲೀಷಿನಲ್ಲಿ ದೊಡ್ಡ ದೊಡ್ಡ ಭಾಷಣಮಾಡುತ್ತಿದ್ದರಂತೆ ಅಲ್ಲವೇ?"

"ಕಲಿತರೆ ಬಾರದೆ ಏನು? ಎಲ್ಲರೂ ಎಲ್ಲವನ್ನೂ ಹುಟ್ಟುವಾಗಲೇ ಕಲಿತು ಬರುವುದು ಅಸಾಧ್ಯ ತಾನೆ. ಎಳೆತನದಲ್ಲಿ ಅಸಾಧ್ಯವಾಗಿ ಕಂಡುದೆಲ್ಲಾ ಅಭ್ಯಾಸ ಬಲದಿಂದಲೇ ಸಾಧ್ಯವಾಗುವುದು. ಹೀಗಿರುವ ಗಾಂಧೀಜಿಯನ್ನು ಕಳಿಸುವುದಕ್ಕೆ ಮನಸ್ಸು ಬಾರದಿರಲು ಅವರಲ್ಲಿರುವ ವಿಶೇಷವಾದ ಮಮತೆಯೇ ಕಾರಣ. ಬಡಗಾಂಧಿಜಿ ಸಹಾಯ ಕೇಳುವ ಬಗ್ಗೆ ಒಂದು ಪತ್ರ ಬರೆದು ಕೊಡಬೇಕೆಂದರು. ಮನಸ್ಸಿಲ್ಲದ ಅವರ ಚಿಕ್ಕಪ್ಪ ನೀನೇ ಬರಕೊಂಡರೆ ಸಾಕೆಂದರು. ಗಾಂಧೀಜಿ ಅವರ ಭೇಟಿ ಮಾಡಿದರೂ ಏನೂ ಪ್ರಯೋಜನವಾಗದೆ ಹೋಯಿತು. 'ನೀನು ಬಿ. ಎ., ಕಲಿ'ಯೆಂದು ಅವರು ಹೇಳಿದರು."

"ಅಣ್ಣಾ! ಆದರೆ ಅವರು ಬಿ. ಎ., ಕಲಿಯಲಿಲ್ಲವೇ?"

"ಇಲ್ಲ. ಬಿ. ಎ., ಕಲಿತರೆ ತಂದೆಯ ದಿವಾನಗಿರಿ ಸಿಕ್ಕಲಾರದು. ಅದರಿಂದ ಏನೂ ಪ್ರಯೋಜನವಿಲ್ಲ. ಎಲ್ಲಾದರೂ ಆ ಬಳಿಕ ಉದ್ಯೋಗಕ್ಕೆ ಸೇರಿದರೂ ತಿಂಗಳು ಒಂದರ ಅರುವತ್ತು ರೂಪಾಯಿ ದೊರೆಯಬಹುದು. ಬ್ಯಾರಿಸ್ಟರ್ ಕಲಿಯಲು ಕಳುಹುವುದೇ ಯೋಗ್ಯವೆಂದು

ದವೆ ಹೇಳಿದ್ದರು. ತಾಯಿಯನ್ನು ಒಪ್ಪಿಸುವುದು ಗಾಂಧೀಜಿಯ ಕೆಲಸ ವಾಯಿತು. ಅವರು ಒಪ್ಪಿದರೂ ಹಣಕ್ಕೇನು ಮಾಡುವುದೆಂದರಿಯಲಿಲ್ಲ."

"ಆದರೆ ಬಹಳ ಕಷ್ಟವೇ ಆಯಿತು."

"ಬಹಳ ಚಿಂತೆಗೊಳಗಾದರು. ವಿದ್ಯಾಭ್ಯಾಸಕ್ಕಾಗಿ ಇನ್ನೇನು ಮಾಡಲಿ? ಎಂಬುದೇ ಅವರ ಮನದ ಚಿಂತೆಯಾಯಿತು. ತನ್ನ ಹೆಂಡತಿ ಕಸ್ತೂರಿ ಬಾ ಅವರ ಚಿನ್ನದೊಡವೆಗಳನ್ನು ಮಾರಿದರೆ ಎರಡು ಮೂರು ಸಾವಿರ ರೂಪಾಯಿ ಹೇಗೂ ಸಿಕ್ಕಬಹುದು, ತಾಯಿಯನ್ನು ಹೇಗೂ ಒಪ್ಪಿಸಬಹುದೆಂದು ಎಣಿಸಿಕೊಂಡರು."

"ಆದರೆ ವಿದ್ಯಾಭ್ಯಾಸಕ್ಕಾಗಿ ಹೆಂಡತಿಯ ಆಭರಣವನ್ನು ಮಾರ ಬೇಕಾಯಿತೇ!"

"ಮಾರಲಿಲ್ಲ. ಹೆಂಡತಿಗೆ ಆಭರಣವನ್ನು ಮಾಡಿಸುವುದು ಬಿಟ್ಟು ಇದ್ದ ಆಭರಣವನ್ನೂ ಕೂಡ ಮಾರುವ ಕೆಲಸಕ್ಕಿಳಿಸಬೇಕಲ್ಲಾ ಎಂಬ ವ್ಯಥೆ ಅವರಲ್ಲಿ ಉಂಟಾಗಿತ್ತು. ಆದರೆ ಅವರ ಅಣ್ಣ ಅವರ ತಮ್ಮನ ಬಗ್ಗೆ ತೋರುವ ಆದರ ಅಪಾರವಾಗಿತ್ತು. ತಮ್ಮನನ್ನು ಸಾಲ ಮಾಡಿ ಯಾದರೂ ವಿದ್ಯಾಭ್ಯಾಸಕ್ಕೆ ಕಳುಹುವುದೆಂದು ನಿರ್ಧಾರಮಾಡಿದರು.

"ಆದರೆ ಅಮ್ಮ ಒಪ್ಪಿದರೇನಣ್ಣಾ!"

"ಗಾಂಧೀಜಿ, ಪರದೇಶಕ್ಕೆ ಹೋದರೆ ಏನು ಮಾಡುವರೋ ಎಂದು ಅವರೂ ಸಂಶಯಪಟ್ಟರು. ಸ್ವಾಮಿಯವರ ಒಪ್ಪಿಗೆಯಿದ್ದರೆ ನೀನು ಹೋಗಬಹುದೆಂದು ಹೇಳಿದರು."

"ಯಾವ ಸ್ವಾಮಿಯವರೊಡನೆ ಕೇಳ ಹೇಳಿದರಣ್ಣಾ!"

"ಬೇಚರಜೀ ಸ್ವಾಮಿಯೆಂದು ಅವರ ಹೆಸರು. ಅವರು ಮೊದಲು ಮೋಡ ಬನಿಯರಾಗಿದ್ದು ಆ ಬಳಿಕ ಜೈನ ಸಾಧುವಾದರು. ಅವರು ಮಾಧವಜಿ ದವೆಯಂತೆಯೇ ಅವರ ಕುಟುಂಬಕ್ಕೆ ಸಲಹೆ ಕೊಡುವವ ರಾಗಿದ್ದರು."

"ಅವರೇನೆಂದರು?"

"ಅವರು ಗಾಂಧೀಜಿಯ ಅಭಿಪ್ರಾಯಕ್ಕೆ ಒಪ್ಪಿಗೆಯಿತ್ತರು. ಪುತಲೀ ಬಾಯಿಯವರಿಗೆ—ತಮ್ಮ ಮಗನು ಮದ್ಯಮಾಂಸ ನಿಷೇಧಿಸುವೆನೆಂದೂ ಸ್ತ್ರೀಸಂಗ ಮಾಡಲಾರೆನೆಂದೂ ಪ್ರತಿಜ್ಞೆ ಮಾಡಿ ತೆರಳಬಹುದು ಎಂದು ಸಮಾಧಾನ ಹೇಳಿದರು. ಗಾಂಧೀಜಿ ಆ ಬಗ್ಗೆ ಪ್ರತಿಜ್ಞೆಮಾಡಿದರು. ಈ ಮೂರು ವಿಷಯಗಳ ಬಗ್ಗೆ ಪ್ರತಿಜ್ಞೆ ಮಾಡಿ ಹೊರಡುವುದಕ್ಕಣಿಮಾಡಿದರು."

"ಗಾಂಧಿ ಅಜ್ಜನಿಗೆ ತಾಯಿ ಒಪ್ಪಿದ್ದು, ಹೋದ ಜೀವ ಬಂದಷ್ಟು ಉಲ್ಲಾಸ ಬಂದಿರಬಹುದಲ್ಲವೇ?"

"ತಾನು ಬ್ಯಾರಿಸ್ಟರನಾಗುತ್ತೇನೆಂಬ ಅವರ ಯೋಚನೆ ಕೈಗೂಡುತ್ತಾ ಬಂದಾಗ ಮತ್ತೆ ಕೇಳಬೇಕೆ? ಗಾಂಧೀಜಿ ವಿಲಾಯಿತಿಗೆ ಹೋಗುತ್ತಾರೆಂದು ಹಿತಚಿಂತಕರಿಗೆಲ್ಲಾ ಸಂತೋಷವೇ ಆಯಿತು. ಅವರು ಕಲಿತ ಹೈಸ್ಕೂಲಿನಲ್ಲಿ ಅವರಿಗೆ ಸತ್ಕಾರಕೂಟವನ್ನೂ ಏರ್ಪಡಿಸಿದರು. ಅಲ್ಲಿ ಏನು ಮಾತನಾಡಬೇಕೆಂದೇ ಅವರಿಗರಿಯಲಿಲ್ಲ. ಗಾಂಧೀಜಿ ಬೊಂಬೈಗೆ ಹಡಗು ಹತ್ತುವುದಕ್ಕಾಗಿ ಹೊರಟರು."

* * * * * *

"ಅಣ್ಣಾ! ಗಾಂಧಿ ಅಜ್ಜ ಹೇಗೂ ಕಲಿಯಲು ಹೋಗಿ ಬಿಟ್ಟರಲ್ಲವೇ?"

"ಇಲ್ಲ ತಡೆ ತಡೆ. ಅವರಿಗೆ ಬೊಂಬೈಯಿಂದ ಕೂಡಲೇ ಹಡಗು ಹತ್ತಿ ಹೋಗಲಾಗಲಿಲ್ಲ."

"ಅದೇಕಣ್ಣಾ"

"ಜೂನಿನ ಸಮಯ. ಬಿರುಗಾಳಿ ಜೋರಾಗಿ ಬೀಸುತ್ತಿರುವುದರಿಂದ ಸದ್ಯ ಪ್ರಯಾಣ ಬೆಳೆಸುವುದು ಅಪಾಯಕರವೆಂದು ಅಲ್ಲಿಂದ ಮಿತ್ರರು ಹೇಳಿದರು. ಅಷ್ಟರಲ್ಲೇ ಒಂದು ಹಡಗ ತುಫಾನ್ ಬಿರುಗಾಳಿಗೆ ಸಿಕ್ಕಿ ಮುಳುಗಿ ಹೋಯಿತೆಂದೂ ಸುದ್ದಿ ಸಿಕ್ಕಿತು. ಗಾಂಧೀಜಿಯನ್ನು ನವಂಬರ್ ತನಕ ಪ್ರಯಾಣ ಮಾಡಲು ಬಿಡಬಾರದೆಂದೂ ಅವರ ಅಣ್ಣನವರಿಗೆ ಎಚ್ಚರಿಕೆ ಕೊಟ್ಟರು."

"ಅಯ್ಯೋ! ಗಾಂಧೀಜಿಗೆ ಹೋದಲ್ಲೆಲ್ಲಾ ಎಷ್ಟು ತೊಡರಾಯಿತಣ್ಣಾ!"

"ಒಳ್ಳೆಯ ಕೆಲಸಗಳೆಲ್ಲವೂ ನಿರ್ವಿಘ್ನನಾಗಿ ಸಾಗುವುದು ಅಪರೂಪವೇ ಸರಿ. ಯಾವ ಕಷ್ಟ ಬಂದರೂ ಬಿಡದೆ ಸಾಧಿಸುವುದು ಮಾತ್ರ ಮನುಷ್ಯನ ಕರ್ತವ್ಯ; ಗಾಂಧೀಜಿಯ ಅಣ್ಣ ಅವರನ್ನು ನವಂಬರ್ ತಿಂಗಳ ತನಕ ಅಲ್ಲಿಯೇ ಇರಹೇಳಿ ಅವರಿಗೆ ಖರ್ಚಿಗಿರುವ ಹಣವನ್ನು ಭಾವನವರೊಡನೆ ಕೊಟ್ಟು ತಮ್ಮೂರಿಗೆ ಹಿಂತಿರುಗಿದರು.

"ಗಾಂಧೀಜಿ ಅಷ್ಟು ಸಮಯ ಏನೂ ಮಾಡುತ್ತಿದ್ದರಣ್ಣಾ!"

"ಮಾಡುವುದೇನು? ತಮ್ಮ ಬವಣೆಗಾಗಿ ವ್ಯಥೆಪಡುತ್ತಿದ್ದರೆನ್ನಬಹುದು. ಅಲ್ಲಿಯೂ ಅವರನ್ನು ಹಲವು ತೊಂದರೆಗಳು ಕಾದಿದ್ದು ಪೀಡಿಸತೊಡಗಿದವು."

"ಏನಾಯಿತು? ಪಾಪ!"

"ಗಾಂಧಿಜೀ ಪಾಶ್ಚಾತ್ಯ ದೇಶಕ್ಕೆ ವಿದ್ಯಾಭ್ಯಾಸಕ್ಕಾಗಿ ತೆರಳುವರೆಂಬ ಸುದ್ದಿ. ಅವರ ಕುಲದಲ್ಲಿ ಹಬ್ಬಿತು. ಇದು ತನಕ ಯಾವ ಮೋಡ ಬನಿಯನೂ ಕಡಲು ದಾಟಿ ಹೋಗಿರಲಿಲ್ಲ."

"ಆದ್ದರಿಂದ ಅವರಿಗೆಲ್ಲಾ ಬಹು ಸಂತೋಷವೇ ಆಗಿರಬಹುದಲ್ಲವೇ? ತಮ್ಮ ಕುಲದವನೊಬ್ಬನು ಉಚ್ಚ ಶಿಕ್ಷಣ ಪಡೆದು ಏಳ್ಗೆಯ ಹಾದಿ ಹಿಡಿಯುವನೆಂದು ಆನಂದಪಟ್ಟಿರಬಹುದು ತಾನೆ?"

"ಹಾಗೆ ಆನಂದಪಡಲಿಲ್ಲ; ಅಷ್ಟು ವಿವೇಕ ಅವರಲ್ಲಿರಲಿಲ್ಲ. ಜಾತಿಯ ಭೂತ ಅವರನ್ನು ಕಾಡುತ್ತಿತ್ತು. ಐರೋಪ್ಯ ದೇಶಕ್ಕೆ ತೆರಳಿ, ಬನಿಯ ಸಮಾಜಕ್ಕೇ ಇಲ್ಲದ ಕುಂದನ್ನು ಈ ಪೋರ ತರುವನೆಂದವರೆಲ್ಲಾ ಉದ್ರೇಕಗೊಂಡರು."

"ಎಂಥಾ ಅವಿವೇಕ?"

"ಅವಿವೇಕವೋ! ವಿವೇಕವೋ! ಗಾಂಧೀಜಿಗೆ ಮಾತ್ರ ಅಸಹ್ಯವೇದನೆಡೆಗೊಟ್ಟಿತು."

"ಮತ್ತೇನು ಮಾಡಿದರಣ್ಣಾ!"

"ಕುಲದ ಹಿರಿಯ ಗುರಿಕಾರ ತನ್ನನ್ನು ಕಾಣಬೇಕೆಂದು ಗಾಂಧೀಜಿಗೆ ಹೇಳಿ ಕಳುಹಿಸಿದರು."

"ಪಾಪ! ಗಾಂಧಿ ಅಜ್ಜ ಆಗ ಎಷ್ಟು ಹೆದರಿದರೋ ಏನೋ?"

"ಈ ಬಾರಿ ನನ್ನಜ್ಜ ಬೆಚ್ಚಲಿಲ್ಲ. ಬೆದರಲಿಲ್ಲ. ಧೈರ್ಯದಿಂದ ಅವರೆದುರು ಹಾಜರಾದರು. ಕುಲದ ಹಿರಿಯ ಸೇಠಜಿ ಕುಲದವರದೊಂದು ಸಭೆಯನ್ನೇ ಕರೆದಿದ್ದರು. ಅವರ ಮುಂದೆ ಗಾಂಧೀಜಿಯು ವಿಚಾರವನ್ನು ವಿರೋಧಿಸಿ ಅವರ ಪಯಣವನ್ನು ತಡೆಯುವುದೇ ಅವರ ಉದ್ದೇಶವಾಗಿತ್ತು."

"ಅಬ್ಬಾ ಅವರ ದುರಾಲೋಚನೆಯೇ!"

"ದುರಾಲೋಚನೆಯೇನು? ಸಂಪ್ರದಾಯ ಶರಣರೆನಿಸಿದ ಅವರು ಗಾಂಧೀಜಿ ದುರ್ವ್ಯಸನಗಳಿಗೆ ಬಿದ್ದು ಹಾಳಾಗುವರೆಂದೆಣಿಸಿದರು. ಗಾಂಧೀಜಿ ಯೊಡನೆ—'ಅಲ್ಲಿನ ಬಾಳು ನಮ್ಮ ಕುಲಕ್ಕೆ ಹೇಳಿದುದಲ್ಲ. ನಿನ್ನ ಯೋಚನೆ ಯನ್ನು ಬಿಟ್ಟು ಬಿಡಬೇಕು. ನಮ್ಮ ಆಚಾರ ವಿಚಾರಗಳನ್ನು ತ್ಯಜಿಸಿ ಐರೋಪ್ಯರ ಹಾಳು ಮಾರ್ಗವನ್ನು ನೀನು ಅಲ್ಲಿ ಅನುಸರಿಸುವೆಯೆಂಬುದು ಖಂಡಿತ. ಪಾಶ್ಚಾತ್ಯರಂತೆ ಮದ್ಯ ಮಾಂಸಗಳನ್ನು ತಿಂದು ಕುಲಕ್ಕೆ ಕಲಂಕ ವಾಗುವೆ. ನಮಗೆ ಈ ವಿಷಯದಲ್ಲಿ ಎಳ್ಳಷ್ಟೂ ಸಮಾಧಾನವಿಲ್ಲ' ಎಂದು ನುಡಿದರು."

"ಗಾಂಧೀಜಿ ಏನೆಂದರಣ್ಣಾ!"

"ಹೇಳುವುದೇನು? ತನ್ನ ನಿರ್ಧಾರವನ್ನು ತಿಳಿಸಿದರು. 'ತಾವು ಎನ್ನು ತ್ತಿರುವ ವಿಚಾರದಲ್ಲಿ ಮೊದಲೇ ಯೋಚಿಸಿದ್ದೇನೆ. ನನ್ನ ತಾಯಿಯೊಡನೆ ತಾವು ಹೇಳುವ ಕೆಡುಕು ಸಂಭವಿಸದಂತೆ ಮದ್ಯ ಕುಡಿಯೆನೆಂದೂ ಮಾಂಸ ತಿನ್ನೆನೆಂದೂ, ಸ್ತ್ರೀಸಂಗ ಮಾಡೆನೆಂದೂ ಪ್ರತಿಜ್ಞೆ ಮಾಡಿದ್ದೇನೆ.' ಎಂದರು. ಗಾಂಧೀಜಿಯು ಮಾತನ್ನು ಕೇಳಿ ಅವರಿಗೆ ಸಿಟ್ಟು ಬಂದಿತು."

"ಅಣ್ಣಾ! ಸಿಟ್ಟು ಬಂದು ಗಾಂಧಿ ಅಜ್ಜನಿಗೆ ಹೊಡೆದರೇ?"

"ಹಾಗೆಲ್ಲಾ ಹೊಡೆಯುವುದೇನು ಮಕ್ಕಳಾಟಿಕೆಯೇ?"

"ಅಲ್ಲ ಎಷ್ಟಾದರೂ ಗಾಂಧಿ ಅಜ್ಜ ಆಗ ಚಿಕ್ಕವರಲ್ಲವೇ? ತುಂಟ ಪೋರ ನಾಗಿ ಹೇಳಿದ ಹಾಗೆ ಕೇಳುವುದಿಲ್ಲವೆಂದು ಹಾಗೇನಾದರೂ ಮಾಡಿದರೇ? ಎಂದು ಕೇಳಿದೆ."

"ಹೊಡೆಯಲಿಲ್ಲ. 'ಆದರೆ ನೀನು ಹೇಳಿದ ಹಾಗೆ ಕೇಳುವುದಿಲ್ಲವೇ?' ಎಂಬುದು ಸೇಟುಗಳ ಪ್ರಶ್ನೆ."

"ಅದಕ್ಕೇನೆಂದರು?"

"—ನಾನು ನಿಮ್ಮ ಈ ಪ್ರಶ್ನೆಗೆ ಉತ್ತರ ಕೊಡಲು ಸಮರ್ಥನಲ್ಲ—ಆದರೆ ಈ ವಿಷಯದಲ್ಲಿ ತಾವು ನನಗೆ ಅಡ್ಡ ಬರಬಾರದೆಂದು ನನಗೆ ತೋರುತ್ತಿದೆ—ಎಂದು ಧೈರ್ಯವಾಗಿ ಹೇಳಿದರು. ಇದರಿಂದ ಅವರ ಸಿಟ್ಟು ಮತ್ತಷ್ಟು ಉಕ್ಕೇರಿತು. ಗಾಂಧೀಜಿಗೆ ಕದಲದೆ ಅಲ್ಲೇ ನಿಂತರು.

"ಅವರು ಸಿಟ್ಟು ಬಂದು ಮಾಡಿದ್ದೇನು?"

"ಸಿಟ್ಟು ಬಂದು ಮಾಡುವುದೇನು? ಸಾಧ್ಯವಾದಷ್ಟು ತೊಂದರೆ ಕೊಡಬಹುದಷ್ಟೆ."

"ಆದರೇನು ಮಾಡಿದರಣ್ಣಾ!"

"ಮಾಡುವುದೇನು? ಎಲ್ಲಾ ಬನಿಯರ ಮುಂದೆ ಗಾಂಧೀಜಿ ಜಾತಿ ಬಹಿಷ್ಕೃತರಾಗಿರುವರೆಂದೂ ಅವರನ್ನು ಬೀಳ್ಕೊಡುವ ಬಗ್ಗೆ ಯಾವ ಒಬ್ಬ ವೋಡ ಬನಿಯನಾದರೂ ರೇವಿನೆಡೆಗೆ ಹೋಗಕೂಡದೆಂದೂ ಹಾಗೆ ಹೋದಲ್ಲಿ ಆ ತಪ್ಪಿನ ಬಗ್ಗೆ ಒಂದೊಂದು ರೂಪಾಯಿ ಜುಲ್ಮಾನೆ ವಿಧಿಸಲಾಗುವುದೆಂದೂ ಆಜ್ಞೆಯಿತ್ತರು."

"ಅಯ್ಯೋ ಜರಿಯ ಮೇಲೆ ಜಜ್ಜರಿ ಎನ್ನುವಂತಾಯಿತಲ್ಲಾ! ಮೊದಲು ತಂದೆಯ ಮರಣ, ಪುತಲೀಬಾಯಿಯವರ ಅಗಲು, ಹೆಂಡತಿ ಮಕ್ಕಳ ವಿರಹ ಇವುಗಳಿಂದೆಲ್ಲಾ ನೊಂದ ಗಾಂಧಿ ಅಜ್ಜ ಆ ಪರವೂರಿನಲ್ಲಿ ಎಷ್ಟು ನೊಂದು ಕೊಂಡಿರಬಹುದು."

"ತಮ್ಮಾ! ನಿಜವಾಗಿಯೂ, ಗಾಂಧೀಜಿಗೆ ವಿಶೇಷವಾದ ತಳಮಳ ವುಂಟಾಯಿತು. ಮೇಲಿಂದ ಮೇಲೆ ತೊಂದರೆಯೇ ಬರುತ್ತಿರುವ ಹೊತ್ತಿಗೆ ಎಂಥ ವೀರನಿಗೂ ಗಾಬರಿಯಾಗದಿರದು. ಜಾತೀಯ ಮೇಲೆ ವಿಶೇಷ ಶ್ರದ್ಧೆಯುಳ್ಳವರಾದ ಹಿರಿಯರು ಈ ಜಾತೀಯ ಬಹಿಷ್ಕಾರವನ್ನು ತಿಳಿದು ಮುಂದೇನೆನ್ನುವರೋ ಎಂಬ ಸಂಶಯ ಅವರ ಹೃದಯವನ್ನು ಕೊರೆಯಿತು. ಅಣ್ಣ ಈ ಸುದ್ದಿಯನ್ನು ತಿಳಿದರೆ ಹೋಗುವುದು ಬೇಡವೆನ್ನಬಹುದೇ? ಪ್ರೀತಿಯ

ಅಮ್ಮ ಎಷ್ಟು ಕಳವಳಗೊಳ್ಳುವರೋ ಏನೆನ್ನುವರೋ ಎಂಬ ಚಿಂತೆ ಕಾಡು ತಿತ್ತು."

"ಪಾಪ! ಪರವೂರಿನಲ್ಲಿ ಗಾಂಧಿ ಅಜ್ಜನಿಗೆ ಯಾರು ಸಮಾಧಾನ ಹೇಳ ಬಹುದು? ಅವರ ಅಣ್ಣನಿಗೆ ಇವರೇನಾದರೂ ಪಿತೂರಿ ನಡೆಸಿದರೇ?"

"ಪಿತೂರಿಯೇನೂ ನಡೆಸಲಿಲ್ಲ. ಗಾಂಧೀಜಿಗೆ ಇದೇ ಭಯವಿತ್ತು. ಅಣ್ಣನವರಿಗೆ ಪತ್ರ ಬರೆದರು."

"ಅಣ್ಣ ಒಪ್ಪಿದರೇ?"

"ಗಾಂಧೀಜಿಯ ಸುದೈವವಶಾತ್, ಸೇಠರು ಏನು ನಿರ್ಣೈಸಿದರೂ ಸೀಮೆಗೆ ಹೋಗುವುದಕ್ಕೆ ನಮ್ಮ ಸಂಪೂರ್ಣ ಅನುಮತಿಯೇ ಸರಿ ಎಂದು ಉತ್ತರ ಬರೆದರು."

"ಅಣ್ಣಾ! ಗಾಂಧಿ ಅಜ್ಜನಿಗೆ ಅಪಾರ ಸಂತೋಷವಾಗಿರಬಹುದಲ್ಲವೇ? ಅವರ ಅಣ್ಣನನ್ನು ನಿಜವಾಗಿಯೂ ಕೊಂಡಾಡಲೇ ಬೇಕು."

"ಹೌದು ಗಾಂಧಿ ಅಜ್ಜನೇ ಎನ್ನುತ್ತಿದ್ದರು. ತನ್ನಣ್ಣ ತನ್ನನ್ನು ತಂದೆ ಯಂತೆಯೇ ಕಾಣುತ್ತಿದ್ದರೆಂದು."

"ಆದರೆ ಗಾಂಧಿ ಅಜ್ಜ ಒಂದು ಗಂಡಾಂತರದಿಂದಲೇ ಪಾರಾದರೆನ್ನ ಬಹುದು."

"ತಮ್ಮಾ! ಇನ್ನೂ ಅವರಿಗಾಗಿ ಕಾದಿದ್ದ ಬವಣೆ ಮುಗಿದಿರಲಿಲ್ಲ. ಸಪ್ಟಂಬರ ನಾಲ್ಕಕ್ಕೆ ಜುನಾಗಡದ ವಕೀಲರೊಬ್ಬರು ಬ್ಯಾರಿಸ್ಟರ್ ಕಲಿ ಯುವುದಕ್ಕಾಗಿ ವಿಲಾಯಿತಿಗೆ ಹೊರಡಲಿರುವರೆಂದು ತಿಳಿಯಿತು. ಇದು ಹೆಚ್ಚಿನ ಅನುಕೂಲವೇ ಆಯಿತೆಂದು ಸಂತೋಷದಿಂದ ಗಾಂಧೀಜಿ ಅಣ್ಣ ನಿಗೆ ವಿಳಂಬ ಮಾಡದೆ ತಂತಿಕೊಟ್ಟರು."

"ಮತ್ತೇನು ಬೇಡವೆಂದರೇ?"

"ಛೇ, ಮಾತಿಗೆ ಬೆಲೆಯಿಲ್ಲವೇ? ನಿಮಿಷ ನಿಮಿಷಕ್ಕೂ ಒಂದೊಂದು ಮಾತನ್ನು ಹೇಳುವುದು ಸಜ್ಜನರ ಲಕ್ಷಣವಲ್ಲ."

"ಆದರೆ ಮತ್ತಾವ ತೊಂದರೆಯಾಯಿತಣ್ಣಾ!"

"ಗಾಂಧೀಜಿಯ ಅಣ್ಣ ಕೂಡಲೇ ಸಮ್ಮತಿಯಿತ್ತರು. ಅವರ ಸಮ್ಮತಿ ಪಡೆದು ಹೋಗಲಿರುವ ಹಣವನ್ನು ಕೇಳಲಾಗಿ ಭಾವನೆಡೆಗೆ ಸಾಗಿದರು ಪಾಪ! ಅವರ ಈ ಪಯಣ ಸೇಟುಗಳಿಗೆ ವಿರೋಧವಾಗಿರುವುದರಿಂದ ಆ ಬಗ್ಗೆ ತನ್ನ ಪ್ರೋತ್ಸಾಹ ದೊರೆಯದು. ಹಣವನ್ನೂ ಕೊಡಲಾರೆ. ಎಂದು ಭಾವ ಕೇಳಿದಾಗ ಉತ್ತರ ಕೊಟ್ಟರು."

"ಎಂಥಾ ಕೆಲಸವಿದು. ಅರ್ಧ ದಾರಿಯಲ್ಲಿ ಕೈಬಿಟ್ಟಂತಾಯಿತು. ಗಾಂಧೀಜಿಗೆ ಎಷ್ಟು ತೊಂದರೆಯಾಯಿತೋ ಏನೋ! ಅವರಿಗೆ ಗುಟ್ಟಾಗಿ ಯಾದರೂ ಹಣ ಕೊಡಬಾರದಿತ್ತೆ?"

"ತಮ್ಮ ಅವರು ಅಂಥಾ ವಂಚನೆ ಮಾಡಬಾರದಿತ್ತು. ತಮ್ಮಸಿಗೆ ಕೊಡಲಾಗಿ ಅಣ್ಣ ಕೊಟ್ಟ ಹಣವನ್ನಿಟ್ಟುಕೊಂಡು ಸೇಟುಗಳ ಮಾತು ನಡೆಸುವ ಅವರಲ್ಲಿರುವ ನ್ಯಾಯವಾದರೂ ಯಾವುದು?"

"ಅವರಿಗೆ ಅದು ಸರಿ ಕಂಡಿರಬಹುದು. ಇಂಥಾ ವಂಚನೆಯಿಂದ ಎಷ್ಟು ಮಂದಿ ಕಷ್ಟಪಡಬೇಕಾಗುವುದಿಲ್ಲ."

"ಆದರೆ ಅವರ ಪಯಣ ಹೇಗೆ ಸಾಗಿತಣ್ಣಾ!"

"ಮತ್ತಾರೋ ಕುಟುಂಬದವರ ಮನೆಗೆ ಸಾಗಿ ಖರ್ಚಿನ ಬಗ್ಗೆ ಹಣ ಕೇಳಿದರು. ಆ ಹಣವನ್ನು ತನ್ನಣ್ಣನಿಂದ ಕೇಳಿ ಪಡಕೊಳ್ಳಬೇಕೆಂದು ತಿಳಿಸಿದರು. ಗಾಂಧೀಜಿಯ ಸುದೈವವಶಾತ್ ಅವರು ವಿಶ್ವಾಸಪೂರ್ವಕ ಹಣವಿತ್ತು ಗಾಂಧೀಜಿಗೆ ಧೈರ್ಯ ಹೇಳಿದರು."

"ನಿಜವಾಗಿಯೂ ದೇವರು ಗಾಂಧಿ ಅಜ್ಜನ ಕೈಬಿಡಲಿಲ್ಲಣ್ಣ! ಅಂತೂ ತುಂಬಾ ಕಷ್ಟಪಟ್ಟರು."

"ಕಷ್ಟ ಮನುಷ್ಯನ ಆತ್ಮಶಕ್ತಿಯ ಒರೆಗಲ್ಲಂತೆ. ಎಲ್ಲವೂ ಒಳ್ಳೆಯ ದಕ್ಕಾಗಿ ಎಂದು ಗಾಂಧಿ ಅಜ್ಜ ಹೇಳುತ್ತಿದ್ದರು.

"ಹೇಗೂ ಗಾಂಧಿ ಅಜ್ಜನ ಪಯಣ ಸಾಗಿತಲ್ಲವೇ?"

"ಸಾಗಿತು. ಆ ತನಕ ಭಾರತೀಯರ ಉಡುಪು ಧರಿಸುತ್ತಿದ್ದ ಅವ ರಿಗೆ ವೇಷ ಬದಲಾಯಿಸುವುದಕ್ಕೆ ಕಷ್ಟವೇ ಆಯಿತು. ಹಡಗು ಹತ್ತಿದರು.

ಯಾರೊಡನೆಯೂ ಸರಿಯಾಗಿ ಮಾತನಾಡುವುದಕ್ಕೆ ಅವರಿಗೆ ಬರುತ್ತಿರಲಿಲ್ಲ ವಾದ್ದರಿಂದ ಹಡಗಿನಲ್ಲಿದ್ದ ಬಿಳಿಯರೊಡನೆ ಮೂಕರಂತೆಯೇ ವರ್ತಿಸಿದರು."

"ಅದೇಕಣ್ಣ?"

"ಅವರಿಗೆ ಅಷ್ಟು ನಾಚಿಕೆ. ಧೈರ್ಯವೂ ಸಾಲದು."

"ಗಾಂಧಿ ಅಜ್ಜ ಹುಡುಗಿಯರ ಹಾಗೆ ನಾಚಿಕೆಪಟ್ಟರಲ್ಲವೇ? ಅಯ್ಯೋ! ಪಾಪ!"

"ತಮ್ಮಾ! ಹುಡುಗಿಯರಿಗಾದರೂ ಈಗಿನ ಕಾಲದಲ್ಲಿ ನಾಚಿಕೆ ಇಲ್ಲ ಅಲ್ಲವೇ?"

"ಅಣ್ಣಾ! ಅದಿರಲಿ, ಹಡಗಿನಲ್ಲಿದ್ದವರು ಅವರನ್ನು ನೋಡಿ ನಗಲಿಲ್ಲವೇ?"

"ನಕ್ಕಿರಲೂ ಬಹುದು. ಆದರೆ ಬೇರೆಯವರ ದೌರ್ಬಲ್ಯ ಕಂಡು ನಗುವುದು ಸಜ್ಜನರ ಲಕ್ಷಣವಲ್ಲ. ಅದಾವನೋ ಒಬ್ಬ ಗಾಂಧೀಜಿಯನ್ನು ಸ್ವತಃ ಮಾತನಾಡಿಸತೊಡಗಿದನಂತೆ. ಅವರೇನೋ ಮಾತನಾಡಿದರು. ಮೇಜಿನ ಮೇಲೆ ಉಣ್ಣುವುದೂ ಕೂಡ ಗಾಂಧೀಜಿಗೆ ಕಷ್ಟವೇ ಆಯಿತು. ಅಲ್ಲೂ ಅವರಿಗೆ ಮಾಂಸದ ವಿಚಾರವಾಗಿ ಬೋಧನೆ ಕೊಟ್ಟರು."

"ಎಲ್ಲಿ ಹೋದರೂ ಒಂದೇ ಸುದ್ದಿ."

"ಹೌದು. ಮಾಂಸ ತಿನ್ನುವವರೊಡನಿರುವಾಗ ಮಾಂಸ ತಿನ್ನದ ಈ ವ್ಯಕ್ತಿ ಎಲ್ಲರಿಗೂ ವಿಚಿತ್ರವಾಗಿ ಕಂಡಿರಬೇಕು. ಎಲ್ಲರ ಅಭ್ಯಾಸವೂ ಇದೇ ಅಲ್ಲವೇ? ಬಿಳಿ ಜನರ ರೀತಿನೀತಿ ನಮಗೆ ವಿಚಿತ್ರವಾಗಿ ತೋರುವುದಿಲ್ಲವೇ? ಬೀಡಿ ಎಳೆವ ಪೋರ ಬೀಡಿ ಎಳೆ ಎನ್ನುವ ಹಾಗೆ ಮಾಂಸ ತಿನ್ನುವ ಜನ ಮಾಂಸ ತಿನ್ನೆಂದು ಒತ್ತಾಯಿಸಲೇ ಬೇಕಷ್ಟೇ!"

"ಮಾಂಸದ ಪ್ರಶ್ನೆ ಬಹಳ ದೊಡ್ಡದಾಗಿಯೇ ಉಳಿಯಿತಲ್ಲಾ!"

"ಗಾಂಧೀಜಿಗೆ ಈ ಪ್ರಶ್ನೆ ಒಂದು ಸಮಸ್ಯೆಯಾಗಿಯೇ ಉಳಿಯಿತು. ಮಾಂಸ ತಿನ್ನದೆ ಇಂಗ್ಲೆಂಡಿನಲ್ಲಿ ಬದುಕುವುದೇ ಅಸಾಧ್ಯ, ಊರಿಗೆ ಹಿಂತಿರುಗುವುದೇ ಲೇಸೆಂದೂ ಕೆಲವರು ಹೇಳದೆ ಬಿಡಲಿಲ್ಲ."

"ಮಾಂಸವನ್ನು ಆದರೆ ತಿಂದು ಬಿಟ್ಟರೇ?"

“ಗಾಂಧಿ ಅಜ್ಜ ಆದರೆ ದೊಡ್ಡ ಕಷ್ಟಪಡಬೇಕಾಯಿತು ಅಲ್ಲವೇ? ಇಂಗ್ಲೆಂಡಿನಲ್ಲಿ ಏನೆಲ್ಲಾ ಮಾಡಿದರಣ್ಣಾ!”

“ಇಂಗ್ಲೆಂಡಿನ ಕತೆಯೆಲ್ಲಾ ಬಹಳ ಚಂದವಾಗಿದೆ ತಮ್ಮಾ!”

---

— ೪ —

“ಇಂಗ್ಲೆಂಡಿಗೆ ಗಾಂಧೀಜಿ ಉತ್ಸಾಹದಿಂದ ಹೋದರೇನೋ ನಿಜ. ಹೊಟ್ಟೆ ತುಂಬಾ ಉಂಡು ಒಂದು ತೇಗಾದರೂ ತೇಗುವ ಹಾಗಿರಲಿಲ್ಲ. ಅಲ್ಲಿನ ತಿಂಡಿತಿನಸು ಒಂದೂ ಒಗ್ಗುತ್ತಿರಲಿಲ್ಲ. ಹಸಿವೆ ತಡೆಯಲಾಗುತ್ತಿರಲಿಲ್ಲ. ಎಲ್ಲಾದರೂ ತಿಂಡಿ ತಿನಸಿಗೆ ಮಾಂಸ ಹಾಕುತ್ತಾರೋ ಏನೋ ಎಂದು ಸಂದೇಹವೂ ಬರುತಿತ್ತು. ಬಾಯಿಗೆ ಒಂದೂ ರುಚಿಸದೆ ಹಸಿವೆ ತಡೆಯುತ್ತಿರಲಿಲ್ಲ. ಇದರಿಂದ ಯಾವುದೂ ಬೇಡವೇ ಬೇಡ ಎನ್ನಿಸಿತು ಗಾಂಧಿ ಅಜ್ಜನಿಗೆ.”

“ಮತ್ತೇನು ಮಾಡಿದರಣ್ಣಾ! ಬ್ಯಾರಿಸ್ಟರೂ ಬೇಡ. ಒಂದೂ ಬೇಡ ಎಂದು ಓಡಿ ಬಂದರೇ?”

“ಹಾಗೆಲ್ಲಾ ಓಡಿ ಬರುವುದೇನು ಮಕ್ಕಳಾಟಿಕೆಯೇ?”

“ಮತ್ತೇನು ಮಾಡುವುದಣ್ಣಾ! ಉಣ್ಣದೆ ಸಾಯುವುದಕ್ಕಾಗುತ್ತದೇನು? ನನಗೂ ಅಣ್ಣಾ! ಮನೆ ಬಿಟ್ಟರೆ ಬೇರೆಲ್ಲೂ ಊಟ ಒಗ್ಗುವುದಿಲ್ಲ. ಹಾಗಾಗಿ ನಾನೂ ಮನೆ ಬಿಟ್ಟು ಹೋಗುವುದಿಲ್ಲ!”

“ನೀನು ಬಹಳ ಗಟ್ಟಿಗನಲ್ಲವೇ? ಹಾಗೆಲ್ಲಾ ಮನೆ ಬಿಟ್ಟು ಹೋಗುವುದಕ್ಕೆ ನಿನಗೇನೂ ಬುದ್ಧಿಯಿಲ್ಲವೇ?”

“ಹೌದಣ್ಣಾ! ನಾನೂ ಕೂಡ ಗಾಂಧಿ ಅಜ್ಜನ ಹಾಗೆಯೇ. ನನಗೂ ದೊಡ್ಡ ದೊಡ್ಡ ಕೆಲಸ ಮಾಡಬೇಕೆಂದು ತುಂಬಾ ಆಸೆಯುಂಟು.”

“ನಿನ್ನಿಚ್ಛೆಯಂತೆಯೇ ಆಗಲಿ, ಗಾಂಧಿ ಅಜ್ಜ ಮನೆ ಬಿಟ್ಟು ಕಷ್ಟಪಟ್ಟು ಜಗತ್ತಿಗೇ ಆದರ್ಶವಾಗಿ ನಿಂತಿರಲಿಲ್ಲವೇ? ನೀನು ಮನೆ ಬಿಡಲಾರೆ; ಅನ್ಯರೊಡನೆ ಮಾತನಾಡಲಾರೆ, ಅಂತೂ ಸಾಮಾನ್ಯ ವ್ಯಕ್ತಿ ನೀನಲ್ಲ ಖಂಡಿತ.”

"ಅದೇಕೆ? ನನ್ನಲ್ಲೇನು ವಿಶೇಷವಿದೆಯಣ್ಣಾ!"

"ನಿನಗೆ ಹಾರಲು ಬರುತ್ತದಲ್ಲವೇ?"

"ಹೈ ಜಂಪ್ ಕೂಡ ಮಾಡುತ್ತೇನಣ್ಣಾ!"

"ಹಾಲು ಕುಡಿಯುತ್ತಿಯಲ್ಲವೇ?"

"ವಿಚಿತ್ರ ಪ್ರಶ್ನೆ; ಎಷ್ಟು ಕೊಟ್ಟರೂ ಕುಡಿಯುತ್ತೇನೆ."

"ಆದರೆ ನೋಡು, ನೀನು ಮನೆ ಬಿಡಲೊಲ್ಲೆ; ಹಾರಬಲ್ಲೆ; ಹಾಗಿರುವಾಗ ನೀನು ಬೆಕ್ಕಿನ ಹಾಗೆ ಮಹಾ ಸಾಹಸಿ, ಅದು ಒಲೆಯ ಬುಡ ಬಿಡುವುದಿಲ್ಲ. ಬಹಳ ಜಾಣನಪ್ಪಾ!"

"ಅಣ್ಣಾ! ಏನು ತಮ್ಮನನ್ನು ನೋಡಿ ನಗುತ್ತೀರಾ! ನನಗಿಂತ ನೀವು ಜಾಣರು. ನಿಮಗೆ ಮನೆ ಅಡಿಗೆ ಕೂಡ ಸೇರುವುದಿಲ್ಲ. ಊಟಕ್ಕೆ ಕುಳಿತಾಗ ಉಪ್ಪು ಜಾಸ್ತಿ, ಹುಳಿ ಜಾಸ್ತಿ ಎನ್ನುವುದಿಲ್ಲವೇ?"

"ತಮ್ಮಾ! ಅದರೆ ನೀನೂ ಬೆಕ್ಕು ನಾನೂ ಬೆಕ್ಕು; ಆದರೆ ಜಿರಳೆ ಹಿಡಿಯಲೇ ಇಲ್ಲ. ನಿನಗೆ ತೃಪ್ತಿ ತಾನೆ."

"ಅಣ್ಣಾ ಸಾಕು ತಮಾಷೆ. ಗಾಂಧಿ ಅಜ್ಜ ಊಟಕ್ಕೆ ಮತ್ತೇನು ಮಾಡಿದರು?"

"ಒಂದು ಕಡೆ ಊಟ ಮಾಡುತ್ತಿದ್ದರು. ಉಪ್ಪು ಕಾರ ಹಾಕದ ರೊಟ್ಟಿ ತಿನ್ನಲಾಗುತ್ತಿರಲಿಲ್ಲ. ಶಾಕಾಹಾರಿಗಳ ಹೊಟೇಲರಸಿ ಊಟಕ್ಕೆ ಓಡುತ್ತಿದ್ದರು. ಮೊದಮೊದಲು ಅಲ್ಲಿನ ಕಷ್ಟದಿಂದಲಾಗಿ ಮನೆಯ ನೆನಪಾಗಿ ರಾತ್ರಿಯು ಹೊತ್ತು ಕಣ್ಣೀರು ಸುರಿಸುತ್ತಿದ್ದರಂತೆ. ಪ್ರೇಮದ ಮೂರ್ತಿಯಾದ ಅಮ್ಮ ಕಣ್ಣ ಮುಂದೆ ಕಾಣಿಸುತ್ತಿದ್ದರಂತೆ. ಅವರು ಊಟ ಮಾಡುತ್ತಿದ್ದ ಮನೆಯ ಯಜಮಾನಿ ಗಾಂಧೀಜಿ ಏನನ್ನೂ ಮುಟ್ಟುವುದಿಲ್ಲವಲ್ಲಾ ಎಂದು ವ್ಯಥೆಪಡುತ್ತಿದ್ದರು. ಗೆಳೆಯರೆಲ್ಲಾ — ಮಾಂಸ ತಿನ್ನದೆ ಇಲ್ಲಿ ಬದುಕುವುದು ಅಸಾಧ್ಯ; ಹೀಗಿರುವುದಕ್ಕಿಂತ ಊರಿಗೆ ಹಿಂತಿರುಗುವುದೇ ಲೇಸು — ಎನ್ನುತ್ತಿದ್ದರು. ತಾಯಿಗೆ ಕೊಟ್ಟ ವಚನ ಗಾಂಧೀಜಿಗೆ ನೆನಪಾಗುತ್ತಿತ್ತು."

"ಅಣ್ಣಾ! ಆದರೆ ಗೆಳೆಯರು ಗಾಂಧೀಜಿಯ ಮಾತನ್ನು ಕೆಡಿಸಿ ಬಿಟ್ಟರೇ?"

"ಇಲ್ಲ. ಕೊಟ್ಟ ವಚನ ತಪ್ಪಲಿಲ್ಲ. ಊಟ ಸೇರದಿದ್ದಾಗ ಅವರಿದ್ದ ಮನೆಯಿಂದ ಹತ್ತು ಹನ್ನೆರಡು ಮೈಲು ದೂರದಲ್ಲಿದ್ದ ಶಾಕಾಹಾರದ ಹೊಟೇಲಿಗೆ ತೆರಳಿ ಹೊಟ್ಟೆ ತುಂಬಾ ರೊಟ್ಟಿ ತಿಂದು ಬರುತ್ತಿದ್ದರು. ತಾಯಿಗೆ ವಚನ ಕೊಡದಿದ್ದರೆ ಮಾಂಸ ತಿನ್ನಬಹುದಿತ್ತು, ಆದೇ ತಡೆಯಾಗಿದೆ. ಏನು ಮಾಡಲಿ ಎಂದವರಿಗರಿಯುತ್ತಿರಲಿಲ್ಲ. ಇದರಿಂದಲಾಗಿ ಎಲ್ಲರೂ ಮಾಂಸಾಹಾರಿಗಳಾಗಿರಬೇಕೆಂದೂ ಒಂದು ದಿನ ತಾನೂ ಮಾಂಸಾಹಾರಿಯಾಗಿರಬೇಕೆಂದೂ ಅವರಿಗೆ ಕಾಣುತ್ತಿತ್ತು. ಹೀಗಿರಲು ಒಂದು ದಿನ ತಿರುಗಾಡುತ್ತಿರಲು "ಫಾರಿಂಗ್‌ಡನ್" ಬೀದಿಯಲ್ಲಿ ಶಾಕಾಹಾರಿಗಳ ವಿಶ್ರಾಂತಿ ಗೃಹವೊಂದು ಕಾಣಸಿಕ್ಕಿತು. ಅರಸುತ್ತಿದ್ದ ಬಳ್ಳಿ ಕಾಲಿಗೆಡವಿದರೆ ಎಷ್ಟು ಸಂತೋಷವಾಗುವುದೋ ಅಷ್ಟೇ ಸಂತೋಷದಿಂದ ಗಾಂಧೀಜಿ ಆ ಹೊಟೇಲನ್ನು ಪ್ರವೇಶಿಸಿದರು. ಅಲ್ಲಿ "ಸಾಲ್ಟ" ಎಂಬವನು ಬರೆದ "ಸಾತ್ವಿಕಾಹಾರದ ಗುಣ"ವೆಂಬ ಪುಸ್ತಕ ಕಾಣಸಿಕ್ಕಿತು. ಅದನ್ನು ಕೊಂಡು ಓದಿದಾಗ ಅವರಿಗೆ ಅಚ್ಚರಿಯೆನಿಸಿತು."

"ಯಾಕೆ ಆಶ್ಚರ್ಯವಾಯಿತಣ್ಣಾ!"

"ಗಾಂಧೀಜಿ ಒತ್ತಾಯಕ್ಕಾಗಿ ಮಾಂಸವನ್ನು ತ್ಯಜಿಸಿದ್ದಲ್ಲದೆ ಮನಃಪೂರ್ವಕ ಅದನ್ನು ತ್ಯಜಿಸಿರಲಿಲ್ಲ. ಮಾಂಸಾಹಾರದಿಂದ ತುಂಬಾ ಕೇಡಿದೆ; ಶಾಕಾಹಾರ ತುಂಬಾ ಪ್ರಯೋಜನಕಾರಿ ಎಂದು ಅಂದೇ ಅವರಿಗರಿವಾಯಿತು."

"ಅಣ್ಣಾ! ಏನು ಪ್ರಯೋಜನ?"

"ಬುದ್ಧಿ ಚುರುಕಾಗಿರಲು, ಸೌಜನ್ಯ ನೆಲಸಿರಲು ಶಾಕಾಹಾರದಷ್ಟು ಹಿತವಾದದ್ದು ಇನ್ನೊಂದಿಲ್ಲ—ಆರೋಗ್ಯಕ್ಕೂ ಅದೇ ಹಿತ."

"ಆದರೆ ಗಾಂಧಿ ಅಜ್ಜನಿಗೆ ಬಹಳ ಸಂತೋಷವಾಯಿತೇ?"

"ಅಹುದು. ತನ್ನನ್ನು ಪ್ರತಿಜ್ಞೆ ಮಾಡಿಸಿದ ತಾಯಿಯನ್ನು ಮನದಲ್ಲೇ ಕೊಂಡಾಡಿದರು. ಅವರು ಪ್ರತಿಜ್ಞೆ ಮಾಡಿಸಿದ ದಿನವೇ ಸುದಿನ

ವೆಂದೆಣಿಸಿಕೊಂಡರು. ಆ ಬಳಿಕ ಸಾತ್ವಿಕಾಹಾರದ ಗುಣಕ್ಕೆ ಸೋತ ಅವರು ಅದರ ವಿಷಯವಾಗಿ ಬರೆದ ಪುಸ್ತಕಗಳನ್ನೆಲ್ಲಾ ಓದ ತೊಡಗಿದರು. ಇತರರಿಗೆ ಅದರ ವಿಷಯವಾಗಿ ಬೋಧನೆಯನ್ನು ಕೊಟ್ಟರು."

"ಅಣ್ಣಾ! ಅವರ ಮನಸ್ಸನ್ನು ಪುಸ್ತಕವೇ ಬದಲಾಯಿಸಿತೇ?"

"ಓದಿ ತಿಳಕೊಂಡುದೇ ಪರಿವರ್ತನೆಗೆ ಕಾರಣವಾಯಿತು. ಗಿಳಿಯೋದಿದಂತೆ ಓದಿದರೇನು ಫಲ? ಓದಿದ ಮಂದಿಗಳು ಪ್ರಪಂಚದಲ್ಲಿ ಎಷ್ಟು ಮಂದಿಯಿರುವುದಿಲ್ಲ! ಓದಿ ತಿಳಕೊಳ್ಳುವ ಮಂದಿ ಮಾತ್ರ ವಿರಳ. ಪ್ರಪಂಚದ ಎಲ್ಲಾ ಜ್ಞಾನಿಗಳೂ ಅವತಾರ ಪುರುಷರೂ ಶಾಕಾಹಾರಿಗಳಾಗಿದ್ದರೆಂದು ತಿಳಿದು ಗಾಂಧೀಜಿ ತಾನೂ ಹಾಗಾಗಬೇಕೆಂದು ಯತ್ನಿಸಿದರು."

"ಆದರೆ ನಮ್ಮಜ್ಜ ಓದಿ ಓದಿ ಬುದ್ಧಿವಂತರಾದರಲ್ಲವೇ?"

"ಹೌದು. ಅದಕ್ಕೂ ಒಂದು ಭಾಗ್ಯಬೇಕು. ಓದಿ ಬುದ್ಧಿವಂತರಾಗುವುದು ಅನುಭವದಿಂದ. ಓದಿ ತಿಳಿದು ಆಚರಣೆಗೆ ತಂದವನೇ ನಿಜವಾದ ಭಾಗ್ಯಶಾಲಿ."

"ಅಣ್ಣಾ! ಆದರೆ ತಿಳಿದು ಆಚರಣೆಯಲ್ಲಿಟ್ಟುಕೊಳ್ಳುವುದು ಕಷ್ಟವಾದ ಕೆಲಸವಲ್ಲವೇ?"

"ಕಷ್ಟವೇನು? ಬಲ್ಲವನಿಗೆ ಅದೇ ಸುಖ ತರುವುದು. ಒಳ್ಳೆಯದಕ್ಕಾಗಿ ಕಷ್ಟ ಬಂದರೆ ಮನಕ್ಕೆ ಅಮಿತ ಶಾಂತಿಯಿರುವುದು. ಗಾಂಧೀಜಿಗೆ ಶಾಕಾಹಾರದಲ್ಲಿ ವಿಶ್ವಾಸವುಂಟಾಯಿತು. ಅವರ ಗೆಳೆಯರು ಅವರನ್ನು ಮಾಂಸ ತಿನ್ನುವಂತೆ ಪ್ರೇರೇಪಿಸುತ್ತಿದ್ದರು. ಒಂದು ಬಾರಿ ಗೆಳೆಯರೊಂದಿಗೆ ಭೋಜನಗೃಹಕ್ಕೆ ತೆರಳಿದರು. ಅಲ್ಲಿ ತಂದಿಟ್ಟ ಸಾರಿನಲ್ಲಿ ಮಾಂಸ ಸೇರಿದಂತೆ ಅವರಿಗೆ ಕಂಡಿತು. ಗಾಂಧೀಜಿ ಸಂಕಟದಲ್ಲಿ ಬಿದ್ದರು. ಊಟಕ್ಕೆ ಕುಳಿತಾಗಿದೆ. ಮಾಡುವುದೇನು?"

"ಛೇ! ಗೆಳೆಯನ ಮೋಸವೇ? ಮಾಂಸ ತಿನ್ನಿಸಿ ಅವರ ಪ್ರತಿಜ್ಞೆಯನ್ನು ಕೆಡಿಸಿ ಬಿಟ್ಟನೇ?"

"ಗಾಂಧೀಜಿಗೆ ಅದು ಒಗ್ಗದಾಯಿತು. ಇತ್ತ ವಚನಕ್ಕೆ ತಪ್ಪುವುದು ಅಸಾಧ್ಯ ತಾನೆ? ತನ್ನ ಸಂಶಯವನ್ನು ಗೆಳೆಯನಿಗೆ ತಿಳಿಸಿಬಿಟ್ಟರು. ಗೆಳೆಯನಿಗೆ ಸಿಟ್ಟು ಬಂತು. 'ನೀನು ಸಮಾಜದಲ್ಲಿರಲು ಯೋಗ್ಯನಲ್ಲ. ನಾಗರಿಕ ಪದ್ಧತಿ ನಿನಗೆ ತಿಳಿಯದು. ಮರ್ಯಾದೆಯೆಂದರೇನು ಎಂದು ನೀನು ತಿಳಕೊಂಡಿಲ್ಲ. ಹಾಗಿದ್ದಲ್ಲಿ ನೀನು ಹೊರಟು ಹೋಗಬಹುದು ಎಂದು ಸಿಟ್ಟಿನಿಂದಲೇ ನುಡಿದನು. ಗಾಂಧಿ ಅಜ್ಜ ಅಲ್ಲಿಂದ ಹೊರಟು ಹೋದರು."

"ಮಾಂಸ ತಿನ್ನದುದಕ್ಕಾಗಿ ಸಿಟ್ಟುಗೊಂಡು ಅವರ ಗೆಳೆತನವನ್ನೇ ಬಿಟ್ಟರೇನಣ್ಣ?"

"ಅವರ ಗೆಳೆಯನಿಗೆ ಅಸಮಾಧಾನವೇನೋ ಉಂಟಾಯಿತು. ಆದರೆ ಅವರಲ್ಲಿ ಮಿತ್ರತ್ವಕ್ಕೇನೂ ಕೊರತೆಯುಂಟಾಗಲಿಲ್ಲ. ಗಾಂಧೀಜಿ ನಾಚಿಕೆಯಿಂದಲಾದರೂ ಸುದ್ದಿಯಿಲ್ಲದೆ ಮಾಂಸ ತಿನ್ನಬಹುದೆಂದೆಣಿಸಿದ ಗೆಳೆಯನ ಯತ್ನ ನಿಷ್ಫಲವಾಯಿತು. ಶಾಕಾಹಾರದ ವಿಷಯದಲ್ಲಿ ಗಾಂಧೀಜಿ ಶೋಧನೆಗಾಗಿ ಪುಸ್ತಕಗಳನ್ನು ಓದುತ್ತಿದ್ದರು. ಆಗ ಗೆಳೆಯರು ಇದೆಲ್ಲಾ ಹುಚ್ಚೆಂದೂ, ಮಾಂಸ ತಿನ್ನದಲ್ಲಿ ಜೀವನವೇ ವ್ಯರ್ಥವಾಗುವುದೆಂದೂ ಹೇಳುತ್ತಿದ್ದರು. ಆದರೆ ಗಾಂಧೀಜಿಗೆ ಸಾತ್ವಿಕಾಹಾರದಲ್ಲಿ ಅಚಲ ವಿಶ್ವಾಸ ಉತ್ಪನ್ನವಾಗಿತ್ತು. ಭೋಜನ ಗೃಹದಿಂದ ಗೆಳೆಯನ ಇಚ್ಛೆಗೆ ವಿರುದ್ಧವಾಗಿ ನಡೆದು ಅಸಮಾಧಾನವುಂಟುಮಾಡಿದ ಅವರಿಗೆ ಗೆಳೆಯನ ವಿಚಿತ್ರ ವ್ಯಥೆಯನ್ನು ದೂರ ಮಾಡುವುದೆಂತೆಂದು ಅರಿಯಲಿಲ್ಲ. ತಾನು ಅಸಭ್ಯನೆಂದು ಜನ ತಿಳಿಯದಂತೆ ಏನು ಮಾಡಲೆಂದು ಯೋಚಿಸತೊಡಗಿದರು."

"ಅಣ್ಣಾ! ಮಾಂಸ ತಿನ್ನದಿದ್ದರೆ ಅಸಭ್ಯರಾಗುತ್ತಾರೇನು? ಅದಕ್ಕೇಕೆ ಅಷ್ಟು ಚಿಂತೆ?"

"ತಮ್ಮಾ! ಮಾಂಸ ತಿನ್ನದಿರುವುದೇ ನಿಜವಾದ ಸಭ್ಯತನ. ಹಾಗಿದ್ದರೂ ಅಲ್ಲಿನ ಪದ್ಧತಿ ಅಲ್ಲಿಗೆ ಸಭ್ಯವಾಗಿರುವುದು. ಆಂಗ್ಲೇಯರಂತೆ ಉಡುಪು ಧರಿಸಿ ಆಂಗ್ಲ ನಾಗರಿಕನಾಗಬೇಕೆಂದು ಗಾಂಧೀಜಿಗೆ ಕಂಡಿತು. ಆಂಗ್ಲ ಸಮಾಜಕ್ಕೆ ಸರಿಯಾದ ಉಡುಪು ತನ್ನಲ್ಲಿಲ್ಲವೆಂದು ಹೊಸ ಉಡಿಗೆಗಳನ್ನು ತಯಾರು ಮಾಡಿಸಿದರು. ಹದಿನಾಲ್ಕು ರೂಪಾಯಿ ಕೊಟ್ಟು ಹೇಟು ತೆಗೆದರು. ಸಾಮಾನ್ಯ ನೂರೈವತ್ತು ರೂಪಾಯಿಯ 'ಈವಿನಿಂಗ್ ಸೂಟ್'

ಹೊಲಿಸಿದರು. ರಿಸ್ಟ್ ವಾಚಿಗೆ ಚಿನ್ನದ ಸರಪಣಿಗಳನ್ನು ತರಿಸಿದರು. ಕುತ್ತಿಗೆಗೆ ಕಂಠಗ್ರಂಥಿ (ನೆಕ್ಟೈ) ತೆಗೆದುಕೊಂಡರು. ತಲೆಯನ್ನು ಅಂದವಾಗಿ ಬಗತಲೆ ಮಾಡಿಕೊಂಡರು. ಆಂಗ್ಲ ನಾಗರಿಕನಾಗಲು ಮಹಾಯತ್ನ ಮಾಡಿದರು."

"ಅಣ್ಣಾ! ಗಾಂಧಿ ಅಜ್ಜನಿಗೂ ಈ ಹುಚ್ಚು ಹಿಡಿದಿತ್ತೇ ಈಗಿನ ಮಕ್ಕಳ ಹಾಗೆ."

"ಹೀಗೆಲ್ಲಾ ಎಲ್ಲರೂ ತಿಳಿಯದೆ ಮಾಡುವುದಲ್ಲವೇ?"

"ಅಣ್ಣಾ ಇದಕ್ಕೆಲ್ಲಾ ಗಾಂಧಿ ಅಜ್ಜ ಅಣ್ಣನಿಗೆ ಹಣಕ್ಕೆ ಬರೆದು ತುಂಬಾ ತೊಂದರೆ ಕೊಟ್ಟಿರಲ್ಲವೇ?"

"ಅವರ ವಿಶಾಲ ಹೃದಯದ ಅಣ್ಣ ತಮ್ಮ ಕೇಳಿದಂತೆ ಹಣ ರವಾನಿಸುತಿದ್ದರು. ಆಗಿನ ಕಾಲದಲ್ಲಿ ತನಗೆ ಬೈತಲೆ ಬಿಡಿಸಲು ಹತ್ತು ಮಿನಿಟು ಬೇಕಾಗುತ್ತಿತ್ತು, ಆಗಾಗ ಎಲ್ಲಿ, ಯಾರೊಡನೆ ಮಾತನಾಡುತ್ತಿದ್ದರೂ ಬೈತಲೆ ಸರಿಪಡಿಸಲು ಕೈಹೋಗುತಿತ್ತು, ಎಂದ ಬಳಿಕ ತಮ್ಮನ್ನೇ ತಾವು ನಗುತ್ತಿದ್ದರು. ಆಂಗ್ಲ ನಾಗರಿಕನಾಗುವ ಯತ್ನ ಇಷ್ಟರಲ್ಲೇ ಪೂರೈಸಿರಲಿಲ್ಲ. ನರ್ತನ ಕಲಿಯಬೇಕು. ನಿರರ್ಗಳವಾಗಿ ಮಾತನಾಡ ಕಲಿಯಬೇಕು, ಸಂಗೀತ ಕಲಿಯಬೇಕು, ಪಿಟೀಲು ಕಲಿಯಬೇಕು ಹಾಗಿದ್ದರೆ ತಾನೇ ಆಂಗ್ಲ ನಾಗರಿಕನೆನ್ನಿಸಬಹುದೆಂದು ಕಂಡಿತು."

"ಅಣ್ಣಾ! ಗಾಂಧಿಜಿಯ ಯೋಚನೆ, ಹನುಮಂತನ ಬಾಲದ ಹಾಗೆ ಉದ್ದುದ್ದ ಬೆಳೆಯಿತಲ್ಲವೇ?"

"ಹೌದು ತಮ್ಮಾ! ಇಲಿಗಳ ಕಾಟ ತಡೆಯಲು ಬೆಕ್ಕನ್ನು ಸಾಕಿದ ಸನ್ಯಾಸಿಯ ಕತೆಯ ಹಾಗೆಯೇ ಅವರ ಸ್ಥಿತಿಯಾಯಿತು!"

"ಅದು ಯಾವ ಕತೆಯಣ್ಣಾ?"

"ಅಯ್ಯೋ, ಸೋತು ಬಿಟ್ಟೆ. ನಿನಗಿನ್ನು ರಾಮಾಯಣದೊಳಗೆ ಪಿಟ್ಕಾಯಣ ಅನ್ನಬೇಕಲ್ಲವೇ?"

"ಅಣ್ಣಾ! ತಮ್ಮನಿಗೆ ಕತೆ ಹೇಳಲು ಬೇಸರವೇ?"

"ಇಲ್ಲ, ಇಲಿಗೆ ಬೆಕ್ಕು ಸಾಕಿದರೆ ಅದಕ್ಕೆ ಹಾಲು ಬೇಕು, ಹಾಲಿಗೆ ದನ ಬೇಕು, ದನ ಸಾಕುವುದಕ್ಕೆ, ಆಳು ಬೇಕು, ಆಳು ಇರುವುದಕ್ಕೆ ಮನೆ ಬೇಕು, ಮನೆ ಕಾಯಲು ನಾಯಿ ಬೇಕು, ಅಡುಗೆ ಮಾಡಲು ಜನ ಬೇಕು, ಇತ್ಯಾದಿಯಾಗಿ ಸನ್ಯಾಸಿ ಸಂಸಾರಿಯಾಗಿ ಬಿಟ್ಟನು. ಅದೇ ರೀತಿ ಗಾಂಧೀಜಿಯ ನಾಗರಿಕ ಲಕ್ಷಣಕ್ಕೆ ಒಂದು, ಇನ್ನೊಂದು, ಮತ್ತೊಂದು ಎಂದು ಮಿತಿಯಿಲ್ಲದಾಯಿತು. ಈ ಎಲ್ಲವನ್ನೂ ಕಲಿತುಕೊಳ್ಳುವುದಕ್ಕೆ ಪ್ರತ್ಯೇಕ ಪ್ರತ್ಯೇಕ ಶಿಕ್ಷಕರನ್ನು ಹಾರೈಸಬೇಕಾಯಿತು."

"ಅಣ್ಣಾ! ಆದರೆ ಗಾಂಧಿ ಅಜ್ಜನಿಗೆ ಕುಣಿಯಲು ಬರುತ್ತಿತ್ತೇನು? ಅಬ್ಬಾ! ಗಾಂಧಿ ಅಜ್ಜನ ಸಾಹಸವೇ? ನಮ್ಮಜ್ಜನ ಕತೆ ಬಲು ವಿಚಿತ್ರವೇ ಸರಿ."

"ತಮ್ಮಾ! ಗಾಂಧಿ ಅಜ್ಜನ ಕತೆ ವಿಚಿತ್ರವೂ ಅದ್ಭುತವೂ ಆಗಿದೆ. ಗಾಂಧಿ ಅಜ್ಜನ ಮುಂದಿನ ಕತೆಯನ್ನು ಕೇಳಿದರೆ ತಮ್ಮಾ! ಅವರ ಸಾಹಸ ಧೈರ್ಯ ಎಲ್ಲವೂ ನಿನಗೆ ವಿಸ್ಮಯವನ್ನೇ ಉಂಟು ಮಾಡುವುದು, ಸಮಸ್ತ ಯುರೋಪನ್ನು ನೋಡಬೇಕೆಂದು ಆಶೆಯಾದ ಅವರು ಫ್ರೆಂಚ್ ಭಾಷೆ ಯನ್ನೂ ಅಭ್ಯಾಸ ಮಾಡತೊಡಗಿದರು. ಆದರೆ, ಎರಡು ಮೂರು ತಿಂಗಳುಗಳಲ್ಲೇ ತನ್ನೀ ಸಾಹಸವೆಲ್ಲಾ ನಿಷ್ಪ್ರಯೋಜಕವೆಂದವರಿಗೆ ಕಂಡಿತು. ನಾಟ್ಯ ಕಲಿಯಲು ಭಾರತದಿಂದಿಲ್ಲಿಗೆ ಬರಬೇಕೇ? ಇದರಿಂದ ತಾನು ದೊಡ್ಡ ಮನುಷ್ಯನಾಗಲಿದೆಯೋ? ಇಂಗ್ಲೆಂಡಿನಲ್ಲಿ ಕೆಲಕಾಲ ಇರಬಹುದು. ಆ ಬಳಿಕ ಏನು ಮಾಡಲಿ; ವಿದ್ಯಾರ್ಥಿಯಾಗಿ ಬಂದ ನಾನು ಶಾಲೆಗೆ, ತಕ್ಕ ಯೋಗ್ಯತೆಯನ್ನು ಸಂಪಾದಿಸಬೇಕು, ತನ್ನ ಸದ್ ವ್ಯವಹಾರದಿಂದಲೇ ನಾಗರಿಕನೆನಿಸಿಕೊಳ್ಳಬೇಕು. ಈ ಎಲ್ಲಾ ಹಾಳು ಕಲ್ಪನೆಗಳನ್ನು ಬಿಡ ಬೇಕೆಂದು ಅವರಿಗೆ ಅರಿವುಂಟಾಯಿತು."

"ಆದರೆ ಎಲ್ಲಾ ಅಭ್ಯಾಸವನ್ನೂ ಬಿಟ್ಟುಬಿಟ್ಟರೇ?"

"ಉಡುಗೆಯು ಹೊರತು ಮಿಕ್ಕೆಲ್ಲವನ್ನೂ ಬಿಟ್ಟುಬಿಟ್ಟರು. ತಕ್ಕೊಂಡ ಪಿಟೀಲನ್ನು ಮಾರಿದರು. ತಮ್ಮ ವಿವರವನ್ನು ದಿನನಿತ್ಯ ಗಾಂಧೀಜಿ ಬರೆ ದಿಡುತ್ತಿದ್ದರು. ಕಾಸು ಕಾಸಿಗೂ ಲೆಕ್ಕ ಬರೆದಿಟ್ಟ ಅವರಿಗೆ ತಾನು ಅಣ್ಣನ

ಹಣವನ್ನು ದುರ್ವ್ಯಯಗೊಳಿಸುತ್ತಿದ್ದೇನಲ್ಲಾ! ಮನೆಯಲ್ಲಿ ಅಣ್ಣ ಎಷ್ಟು ಕಷ್ಟಪಡುತ್ತಿದ್ದಾರೋ ಏನೋ? ಅವರು ಕಷ್ಟಪಟ್ಟು ಸಂಗ್ರಹಿಸಿದ ಹಣವನ್ನು ತಾನು ಹಾಳು ಮಾಡುತ್ತಿದ್ದೇನಲ್ಲಾ! ತಾನು ಮಾಡುವುದು ಅನ್ಯಾಯ. ಮಿತವ್ಯಯ ಮಾಡಿದರೆ ಖರ್ಚನ್ನು ಅರ್ಧಾಂಶಕ್ಕಿಳಿಸುವುದು ಏನೂ ಕಷ್ಟವಲ್ಲ ಎಂದವರಿಗೆ ಕಂಡಿತು."

"ಅಣ್ಣಾ! ಅವರ ಮನಸ್ಸೆಷ್ಟು ಕೋಮಲ."

"ತಮ್ಮಾ! ವಿವೇಕಶಾಲಿಗಳು ಒಮ್ಮೆ ತಪ್ಪಿಬಿದ್ದರೂ ಫಕ್ಕನೆ ಎಚ್ಚತ್ತು ತಪ್ಪನ್ನು ತಿದ್ದಿ ಯೋಗ್ಯವಾದ ದಾರಿ ಹಿಡಿಯುವರು. ಗಾಂಧೀಜಿ ಖರ್ಚು ಕಡಮೆ ಮಾಡಲು ಮನೆ ಬಿಟ್ಟು ಎರಡು ಬಾಡಿಗೆಯ ಕೋಣೆಗಳನ್ನು ಪಡಕೊಂಡರು. ಕೆಲ ಸಮಯದಲ್ಲೇ ಬಡ ವಿದ್ಯಾರ್ಥಿಗಳು ಸರಳ ಜೀವನ ಮಾಡುತ್ತಿರುವುದನ್ನು ಕಂಡು ಎರಡು ಕೊಠಡಿಯ ಬದಲು ಒಂದು ಕೊಠಡಿ ಸಾಕೆಂದು ನಿಶ್ಚೈಸಿದರು. ಹೋಟೇಲಿನಲ್ಲಿ ಉಣ್ಣುವುದರ ಬದಲು ಸ್ವತಃ ಅಡುಗೆ ಮಾಡುವುದೇ ಒಳ್ಳೆಯದು ಎಂದು ತೋರಿ ಒಂದೇ ಒಂದು ಕೊಠಡಿಯನ್ನು ಗೊತ್ತು ಹಚ್ಚಿ ಸ್ವತಃ ಅಡುಗೆ ಮಾಡತೊಡಗಿದರು."

"ಅಣ್ಣಾ! ಆದರೆ ಗಾಂಧಿ ಅಜ್ಜ ಐ. ಸಿ. ಯಸ್. ಪಾಸು ಮಾಡಿದರಲ್ಲವೇ?"

"ಅಂದರೆ."

"ಅಡುಗೆ ಮಾಡುವುದು. ಐ. ಸಿ ಯಸ್. ಎಂದರೆ ಇಂಡಿಯನ್ ಕುಕ್ಕಿಂಗ್ ಸರ್ವೀಸ್ ಎಂದೂ (ಬಿ. ಎ. ಎಂದರೆ ಬಿಸ್ಕೂಟಂಬಡೆಯೆಂದೂ) ತಮಾಷೆ ಮಾಡುತ್ತಾರಲ್ಲವೇ?"

"ಆದರೆ ನೀನು ಭಾರೀ ದೊಡ್ಡ ಹಾಸ್ಯಗಾರನೇ? ತೆನ್ನಾಲಿ ರಾಮನಿಗಿಂತಲೂ ಜಾಣನೇನು?"

"ಅಣ್ಣನ ಹಾಗೆ ತಮ್ಮ. ಇದ್ದರೂ ಇರಬಹುದು."

"ಏ ಜಾಣ! ಅಣ್ಣನಿಗಿಂತಲೂ ತಮ್ಮ ಕಡುಜಾಣನಲ್ಲವೇ? ಅದಿರಲಿ. ಅಡುಗೆ ಮಾಡುವುದು ಬಹು ಸುಲಭ. ಇಪ್ಪತ್ತೇ ನಿಮಿಷ ಸಾಕಾಗುತ್ತದೆಂದು ಗಾಂಧೀಜಿ ತಿಳಕೊಂಡರು."

"ಅಣ್ಣಾ! ಹೆಂಗಸರ ಹಾಗೆ ಅಡುಗೆ ಮಾಡಲು ಬೇಸರ ಬರಲಿಲ್ಲವೇ?"

"ತುಸು ಕಷ್ಟವಾಗಿರಬಹುದು. ಇದರಿಂದ ಗಾಂಧೀಜಿಗೆ ಜೀವನದಲ್ಲಿ ಬೇಸರ ಬರಲಿಲ್ಲ. ತನ್ನ ಆತ್ಮಶಕ್ತಿಯನ್ನು ಹೆಚ್ಚಿಸಿಕೊಂಡರು. ಸ್ವತಂತ್ರರಾಗಿ ಬಾಳುವುದಕ್ಕೆ ಕಲಿತುಕೊಂಡರು. ಸರಳ ಜೀವನವನ್ನು ಕೈಗೊಂಡ ಗಾಂಧಿ ಅಜ್ಜ ವಾಹನಗಳಲ್ಲಿ ಅತ್ತಿತ್ತ ಚಲಿಸುವುದನ್ನು ಬಿಟ್ಟು ಕಾಲ್ನಡೆಯಿಂದಲೇನಡೆಯುತ್ತಿದ್ದರು."

"ಅಣ್ಣಾ! ಗಾಂಧಿ ಅಜ್ಜನ ತ್ಯಾಗ ಇಲ್ಲಿಂದಲೇ ಪ್ರಾರಂಭವಾಯಿತಲ್ಲವೇ?"

"ತಮ್ಮಾ! ಗಾಂಧೀಜಿ ಪ್ರಪಂಚಕ್ಕೆ ಆದರ್ಶವ್ಯಕ್ತಿಗಳಲ್ಲವೇ? ತಾನು ಆಚರಿಸಿ ಆದರ್ಶ ವ್ಯಕ್ತಿಯೆನಿಸಿ ಉತ್ತಮನು ಉಪದೇಶಿಸುವನು. ಅದಕ್ಕಾಗಿಯೇ ಅವರು "ಕರೋ ಪಹಲೇ, ಕಹೋ ಪೀಛೇ"—ಮೊದಲು ಮಾಡು ಮತ್ತೆ ಹೇಳು ಎಂದೆನ್ನುತ್ತಿದ್ದರು. ತಮ್ಮಾ! ಗಾಂಧೀಜಿ ಸ್ವತಃ ಎಲ್ಲಾ ಕೆಲಸಗಳನ್ನು ತೀರಿಸಿಕೊಂಡು ಈ ಹೊತ್ತಿನಲ್ಲೇ ಪರೀಕ್ಷೆಯುಲ್ಲಿ ಪಾಸಾದರು."

"ಯಾವ ಪರೀಕ್ಷೆಯುಲ್ಲಿ ಪಾಸಾದರಣ್ಣಾ?"

"ಅವರ ಸಾಮಾನ್ಯ ಜ್ಞಾನವನ್ನು ಅಭಿವೃದ್ಧಿಗೊಳಿಸಬೇಕೆಂದು ಅವರಿಗಿಚ್ಛೆಯಿತ್ತು. ಸರಿಯಾದ ವ್ಯವಹಾರ ಜ್ಞಾನವುಂಟಾಗುವುದಕ್ಕಾಗಿ ಬಿ. ಎ. ಪದವಿಯನ್ನು ಗಳಿಸಬೇಕೆಂದು ಯೋಚಿಸುತ್ತಿದ್ದರು. ದೀರ್ಘಕಾಲ ಅಲ್ಲಿನ ವಿಶ್ವವಿದ್ಯಾನಿಲಯಕ್ಕೆ ಹೋಗಿ ವ್ಯಾಸಂಗ ಮಾಡುವುದೂ ಖರ್ಚನ್ನು ನೋಡಿಕೊಳ್ಳುವುದೂ ಅಸಾಧ್ಯವೆಂದು ತಿಳಿದು ಲಂಡನ್ ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ಕುಳಿತುಕೊಂಡರು. ಪರೀಕ್ಷೆ ಬಹಳ ಕಷ್ಟತರದ್ದಾಗಿದ್ದರೂ ಅವರು ಹಿಂದುಳಿಯಲಿಲ್ಲ. ಮೊದಲ ಬಾರಿ ಲ್ಯಾಟಿನ್ನಿನಲ್ಲಿ ಮಾತ್ರ ಸಾಕಷ್ಟು ಮಾರ್ಕು ದೊರೆತಿರಲಿಲ್ಲ."

"ಅಣ್ಣಾ! ಗಾಂಧೀಜಿಗೆ ಆಗಲೇ ತಾನೊಬ್ಬ ದೊಡ್ಡ ಜನ ಆಗಬೇಕೆಂದು ಆಸೆಯಿತ್ತಲ್ಲವೇ?"

"ವಿಚಿತ್ರ ಪ್ರಶ್ನೆಯನ್ನೇ ಕೇಳುತ್ತಿರುವೆಯಲ್ಲಾ! ತಾನು ದೊಡ್ಡವನಾಗಿ ಮೆರೆಯಬೇಕೆಂದು ಯಾರು ತಾನೆ ಯೋಚಿಸುವುದಿಲ್ಲ. ಅದಕ್ಕಿರುವ

ಒಳ್ಳೆಯ ಗುಣವನ್ನು ಗಳಿಸಿಕೊಳ್ಳುವವರು ಮಾತ್ರ ಇರುವುದಿಲ್ಲ. ಗೌರವವು ಮನುಷ್ಯನಿಗೆ ಅವನ ಕರ್ಮದಿಂದ ದೊರೆಯಬೇಕೇ ಹೊರತು ಅವನ ಮಾನಸಿಕ ಕಲ್ಪನೆಯ ಆಕಾಶ ಗೋಪುರದಿಂದ ದೊರೆಯಲಾರದು. ಹಾಗಿದ್ದರೆ ಅದು ಕೇವಲ ಭ್ರಾಂತಿಯಾಗಿಯೇ ಉಳಿಯುವುದು."

"ಹಾಗಾದರೆ ನಮ್ಮಜ್ಜ ಅಲ್ಲಿ ವಿರಕ್ತರಂತಿರ ತೊಡಗಿದರೇ?"

"ಇಲ್ಲ, ಗಾಂಧಿ ಅಜ್ಜನ ಮನಸ್ಸು ಸದಾ ಸತ್ಯವನ್ನು ಹುಡುಕುತ್ತಿತ್ತು. ಶೋಧನೆಗಳನ್ನು ನಡೆಸಿ ಸತ್ಯವನ್ನು ಕಂಡು ಹಿಡಿಯುವುದಕ್ಕೆ ಯತ್ನಿಸಿದರು."

"ಅಣ್ಣಾ! ಗಾಂಧಿ ಅಜ್ಜನಿಗೆ ಸತ್ಯದಲ್ಲಿ ಅಪಾರ ನಂಬುಗೆಯಿತ್ತಲ್ಲವೇ?"

"ಹೌದು, ಅವರ ಪುಣ್ಯ ಜೀವನವು ಸದಾ ಸತ್ಯವನ್ನರಸುತ್ತಿತ್ತು. ಆದ್ದರಿಂದಲೇ ಅವರ ಜೀವನ ಚರಿತ್ರೆಯನ್ನು ಅವರು 'ಸತ್ಯಶೋಧನೆ'ಯೆಂದೇ ಕರೆದರು. ಮನುಷ್ಯನು ಪಶುಪಕ್ಷಿಗಳನ್ನು ತನ್ನಂತೆಯೇ ಕಾಣಬೇಕು. ಉಣ್ಣುವುದಕ್ಕಾಗಿ ಬದುಕುವುದಲ್ಲ. ಜೀವಿಸುವುದಕ್ಕಾಗಿ ಉಣ್ಣುವುದು. ಭೋಗದೃಷ್ಟಿಯಿಂದ ಆಹಾರ ಸೇವನೆ ವ್ಯರ್ಥವೆಂದು ಕಂಡಿತು. ವಿಲಾಯಿತಿಯಲ್ಲಿ ಶಾಕಾಹಾರಕ್ಕೆ ಸಂಬಂಧಿಸಿದ ಒಂದು ಮಂಡಳಿಯೂ ಇದ್ದಿತು. ಆ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಾಹಕ ಸಮಿತಿಯನ್ನೂ ಪ್ರವೇಶಿಸಿಕೊಂಡರು."

"ಆ ಮಂಡಲಿಯವರೇನು ಮಾಡುತ್ತಿದ್ದರಣ್ಣಾ!"

"ಶಾಕಾಹಾರದ ಶೋಧನೆಗಳನ್ನು ನಡೆಸುತ್ತಿದ್ದರು. ಅದರ ಮಹತ್ವವನ್ನು ಜನರಿಗೆ ತಿಳಿಸಿ ಶಾಕಾಹಾರಿಗಳಾಗುವಂತೆ ಯತ್ನಿಸುತ್ತಿದ್ದರು. ಆ ಬಗ್ಗೆ ಒಂದು ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು."

"ಮೊದಲು ಎಲ್ಲರೂ ಮಾಂಸ ತಿನ್ನಲೇ ಬೇಕೆಂದಿದ್ದ ಗಾಂಧಿ ಅಜ್ಜ ಅಷ್ಟು ಬೇಗನೆ ಎಲ್ಲರೂ ಅದನ್ನು ಬಿಡಬೇಕೆಂದು ಜನತೆಗೆ ಬೋಧಿಸಲು ಅರಿವುಗೊಂಡುದೇ ಆಶ್ಚರ್ಯ! ಆ ಪರವೂರಿನಲ್ಲಿ. ಸಂಘವನ್ನು ಸೇರಿಕೊಂಡು ತನ್ನ ಚಟುವಟಿಕೆಗಳನ್ನೂ ತೋರಿಸ ತೊಡಗಿದರಲ್ಲವೇ? ನಿಜವಾಗಿ ನಮ್ಮಜ್ಜನೇ ಜಾಣ."

"ಅವರಂತೆಯೇ ಇಂದಿನ ಮಕ್ಕಳು ಒಳಿತಿಗಾಗಿ ಸಂಘ ಕಟ್ಟಿ ದುಡಿಯ ಬೇಕು. ಅನ್ಯರ ಸೇವೆಗೆ ಸಿದ್ಧರಾಗಬೇಕು. ಆಹಾರದ ವಿಷಯವಾಗಿ ಶೋಧನೆ ನಡೆಸುತ್ತಿದ್ದ ನಮ್ಮಜ್ಜ ಒಮ್ಮೆ ರೊಟ್ಟಿ ಹಣ್ಣು ಇವುಗಳನ್ನು ಸೇವಿಸುವುದು, ಮತ್ತೊಮ್ಮೆ ಹಾಲು ಬೆಣ್ಣೆ ಮೊಟ್ಟೆ ಇಷ್ಟನ್ನೇ ಸ್ವೀಕರಿಸುವುದು ಹೀಗೆಲ್ಲಾ ಜೀವನ ಮಾಡಲು ಸಾಧ್ಯವೇ ಎಂದು ಶೋಧನೆ ಮಾಡಿದರಂತೆ. ಆದರೆ ಈ ಶೋಧನೆ ಹದಿನೈದು ದಿನಗಳಿಗಿಂತ ಅಧಿಕವಾಗಿ ನಡೆಯಲಿಲ್ಲ."

"ಅಣ್ಣಾ! ಗಾಂಧಿ ಅಜ್ಜ ಕೊಟ್ಟ ಮಾತನ್ನು ಮರೆತು ಬಿಟ್ಟರೇ? ಮೊಟ್ಟೆ ತಿನ್ನಬಹುದೇ?"

"ತಮ್ಮಾ! ಸರಿಯಾದ್ದನ್ನೇ ಕೇಳಿದೆ. ಅಲ್ಲಿನ ಕೆಲವರು ಗಾಂಧೀಜಿಗೆ ಮೊಟ್ಟೆ ಮಾಂಸವಲ್ಲ. ಅದು ಉತ್ತಮ ಆಹಾರವೆಂದೂ ಅದರಲ್ಲಿ ಮಾಂಸವಿಲ್ಲವೆಂದೂ ಮೊಟ್ಟೆ ತಿನ್ನುವುದರಿಂದ ಪ್ರಾಣಿ ಹಿಂಸೆ ಮಾಡಿದಂತಾಗುವುದಿಲ್ಲವೆಂದೂ ಶೋಧನಾ ಸುಧಾರಕರು ಅವರಿಗೆ ಹೇಳಿ ಬೋಧಿಸಿ ಬಿಟ್ಟಿದ್ದರು. ಆದರೂ ಗಾಂಧೀಜಿಗೆ ಫಕ್ಕನೆ ಅರಿವುಂಟಾಯಿತು. ತನ್ನ ಪ್ರತಿಜ್ಞೆಗೆ ಹೊಸ ವ್ಯಾಖ್ಯಾನವನ್ನು ಮಾಡಿ ಅನುಸರಿಸುವ ಅಧಿಕಾರ ತನಗಿಲ್ಲವೆಂದು ತೀರ್ಮಾನಿಸಿಕೊಂಡರು."

"ಬಹಳ ವಿಚಿತ್ರ ಉಪದೇಶವಿದು."

"ತಮ್ಮಾ! ಇನ್ನೂ ಸ್ವಾರಸ್ಯವಿದೆ. ವಿಲಾಯಿತಿಯಲ್ಲಿ ಮಾಂಸ ಎಂಬುದಕ್ಕೆ ಮೂರು ಬಗೆಯ ವಿವರಣೆ ಕೊಡುತ್ತಿದ್ದರಂತೆ."

"ಬಹಳ ಗಟ್ಟಿಗರು."

"ಅದರ ಕತೆ ಕೇಳು. ಮಾಂಸವೆಂದರೆ ಪಶುಪಕ್ಷಿಗಳದು ಮಾತ್ರವೆಂದು ಕೆಲವರು ಹೇಳುತ್ತಿದ್ದರಂತೆ. ಈ ರೀತಿ ಎನ್ನುವ ಮಂದಿ ಮೀನು ತಿನ್ನುತ್ತಿದ್ದರಂತೆ. ಇನ್ನು ಕೆಲವರು ಮೊಟ್ಟೆಯನ್ನು ಬಿಟ್ಟು ಉಳಿದುದೆಲ್ಲಾ—ಎಲ್ಲಾ ಪ್ರಾಣಿಗಳ ಮಾಂಸವೂ ಮಾಂಸವೇ ಎಂದು ನುಡಿಯುತ್ತಿದ್ದರಂತೆ; ಬೇರೆ ಕೆಲವರು ಎಲ್ಲಾ ಪ್ರಾಣಿಗಳ ಮಾಂಸವೂ ಅದರಿಂದ ಉಂಟಾಗುವ ಸಕಲ ಪದಾರ್ಥಗಳೂ, ಹಾಲು ಬೆಣ್ಣೆ ಮೊಸರು ಮೊಟ್ಟೆ ಎಲ್ಲವೂ ಮಾಂಸಕ್ಕೆ ಸೇರಿದ್ದು; ಆದ್ದರಿಂದ ಇವೆಲ್ಲವೂ ತ್ಯಾಜ್ಯವೆಂದೂ ಹೇಳುತ್ತಿದ್ದರು."

"ಅಣ್ಣಾ! ಗಾಂಧೀಜಿ ದೊಡ್ಡ ಸಮಸ್ಯೆಗೆ ಕೈಹಾಕಿದ ಹಾಗಾಯಿತು."

"ಗಾಂಧೀಜಿ ಶಾಕಾಹಾರ ಸಮಿತಿಯ ಕಾರ್ಯನಿರ್ವಾಹಕರಾಗಿಯೂ ಚುನಾಯಿಸಲ್ಪಟ್ಟರು. ಅವರಿಗೆ ಸಭೆಯಲ್ಲಿ ಮಾತನಾಡುವುದಕ್ಕೆ ಕಷ್ಟವಾಗುತ್ತಿತ್ತು. ನಾಲ್ಕು ಜನರೆದುರು ಮಾತನಾಡಲು ಅವರಿಂದಾಗುತ್ತಿರಲಿಲ್ಲ."

"ಅಣ್ಣಾ! ಆದರೆ ಅವರು ಚೆನ್ನಾಗಿ ಮಾತನಾಡಲು ಎಲ್ಲಿ ಅಭ್ಯಾಸ ಮಾಡಿದರು?"

"ದಕ್ಷಿಣ ಆಫ್ರಿಕಕ್ಕೆ ತೆರಳಿದ ಮೇಲೆಯೇ ಅವರ ಈ ಸಾಧನೆ ಸಿದ್ಧಿಗೊಂಡಿತು. ಅವರು ಸಭೆಯಲ್ಲಿ ತಡೆಯಿಲ್ಲದೆ ಮಾತನಾಡಬೇಕೆಂದು ಯತ್ನಿಸಿದರೂ ಆ ಕಾರ್ಯ ಅವರಿಂದಾಗಲಿಲ್ಲ. ಒಂದು ಬಾರಿ ಚೆನ್ನಾಗಿ ಮಾತನಾಡಬೇಕೆಂದು ನಿರ್ಧರಿಸಿ ಹೌಸ್ ಓಫ್ ಕಾಮನ್ಸಿನಲ್ಲಿ ಆಡಿಸನ್ ಭಾಷಣ ಮಾಡಿದ ಕತೆಯನ್ನೇ ಪೀಠಿಕೆಯಾಗಿಟ್ಟು ಮಾತನಾಡಲು ಯತ್ನಿಸಿದರು. ಅಂತೆಯೇ ಪ್ರಾರಂಭ ಮಾಡಿದಾಗ ಮಾತ್ರ ಮುಂದೆ ಮಾತೇ ಹೊರಡಲಿಲ್ಲ."

"ಅಯ್ಯೋ ಅವರಿಗೆಷ್ಟು ನಾಚಿಕೆಯಾಗಿರಬಹುದು. 'ಆಡಿಸನ್' ಭಾಷಣ ಮಾಡಿದ ಕತೆಯೇನಣ್ಣ?"

"ಅವರು ಭಾಷಣ ಮಾಡಲು ನಿಂತವರು "ಐ ಕನ್ಸೀವ್" ಎಂದು ಮೂರು ಬಾರಿ ಹೇಳಿ ಮುಂದೆ ಮಾತು ಬಾರದೆ ಕುಳಿತುಕೊಂಡರು. ಅದನ್ನೇ ಗಾಂಧೀಜಿ ಪ್ರಾರಂಭಿಸಿ ಅಲ್ಲಿಗೇ ಮುಕ್ತಾಯಗೊಳಿಸಿದರು. ಅವರಿಗೆ ಹೆಚ್ಚು ಮಾತನಾಡಲು ಅರಿಯದಿದ್ದುದು ಒಂದು ಬಗೆಯಿಂದ ಒಳ್ಳೆಯದಾಯಿತಂತೆ. ಅದರಿಂದಲಾಗಿಯೇ ಅವರು ಮಿತಭಾಷಿಗಳಾಗಿಯೂ, ಚೆನ್ನಾಗಿ ವಿಚಾರಿಸಿಯೇ ಮಾತನಾಡುವವರಾಗಿಯೂ ಅನೇಕ ರೀತಿಯ ಅನರ್ಥಗಳಿಂದ ಬಾಹಿರರಾಗಿಯೂ ಆದರೆಂದು ಅವರು ಹೇಳುತ್ತಿದ್ದರು. ಗಾಂಧಿ ಅಜ್ಜ ಇಂಗ್ಲೆಂಡಿಗೆ ಹೋಗುವ ಮೊದಲೇ ಅವರಿಗೆ ಮದುವೆಯಾಗಿತ್ತಲ್ಲವೇ?"

"ಹೌದು ಅಲ್ಲೇನು ಮಾತಿಗೆ ತಪ್ಪಿದರೆ?"

"ಇಲ್ಲ, ಸುಳ್ಳು ಹೇಳಿದ್ದರು."

"ಮದುವೆಯಾಗಲಿಲ್ಲವೆಂದರೇ? ಯಾಕೆ ಸುಳ್ಳು ಹೇಳಿದರಣ್ಣಾ? ಎಲ್ಲರೂ ನಗಬಹುದೆಂದೇ?"

"ಹೌದು. ಅಲ್ಲಿ ಇಲ್ಲಿನಂತೆ ಬಾಲ್ಯವಿವಾಹ ನಡೆಯುತ್ತಿರಲಿಲ್ಲ. ಅಲ್ಲಿ ಕಲಿತ ವಿದ್ಯಾರ್ಥಿಗಳೆಲ್ಲಾ ಅವಿವಾಹಿತರು. ಅವರ ದೃಷ್ಟಿಯಿಂದ ಮದುವೆಯಾದವನು ವಿದ್ಯಾರ್ಥಿಯಾಗಿರುವುದು ಅಸಾಧ್ಯವೆಂದು ತೋರುತ್ತಿತ್ತು. ಅಲ್ಲಿ ಯುವಕ ಯುವತಿಯರು ಸ್ವತಃ ಆರಿಸಿಕೊಂಡು ಮದುವೆಯಾಗುತ್ತಿದ್ದರು. ಪ್ರತಿಯೊಬ್ಬ ಯುವಕನೂ ತಾನೇ ಸಹಧರ್ಮಿಣಿಯನ್ನಾರಿಸಬೇಕಾಗಿರುವುದರಿಂದ ಯುವತಿಯರನ್ನು ಯುವಕರ ಜೊತೆಗೆ ಅವರ ಹೆತ್ತವರು ತಿರುಗಾಡ ಬಿಡುತ್ತಿದ್ದರು. ಈ ಕಾರಣಗಳಿಂದ ಇಲ್ಲಿಂದ ಹೋದವರು ತಾವು ಮದುವೆಯಾಗಿದ್ದರೂ ಮರೆಮಾಡುತ್ತಿದ್ದರು. ಗಾಂಧೀಜಿ ವಾಸಿಸುತ್ತಿದ್ದ ಮನೆಯಲ್ಲಿ ಯುವತಿಯರಿದ್ದರು. ಅಲ್ಲಿ ವಿವಾಹವಾಗಿದೆಯೆಂದು ತಿಳಿಸಿದರೆ ಅವರೊಡನೆ ಆಡುವುದಕ್ಕೂ ತಿರುಗಾಡುವುದಕ್ಕೂ ಅಸಾಧ್ಯವಾಗುತಿತ್ತು. ಗಾಂಧೀಜಿ ಇದರಿಂದ ಕಷ್ಟಪಡಬೇಕಾಯಿತು."

"ಅಂದರೆ ಗಾಂಧೀಜಿಗೆ ಮದುವೆ ಮಾಡುವುದಕ್ಕೆ ಯೋಚಿಸಿದರೇ ನಣ್ಣಾ!"

"ಕತೆ ಕೇಳು. ಗಾಂಧೀಜಿ ಅಲ್ಲಿ ಸಮುದ್ರ ತೀರಕ್ಕೆ ತಿರುಗಾಡ ಹೋಗುತ್ತಿದ್ದರು. ಅಲ್ಲಿ ಒಂದು ಹೋಟೇಲನ್ನು ಹೊಕ್ಕಾಗ ಅಲ್ಲಿ ಸಿಕ್ಕುವ ತಿಂಡಿಗಳ ಹೆಸರನ್ನು ಫ್ರೆಂಚ್ ಭಾಷೆಯಲ್ಲಿ ಬರೆದಿದ್ದರು. ಅದು ಗಾಂಧೀಜಿಗೆ ಅರ್ಥವಾಗದೆ ಅವರು ಸುಮ್ಮನೆ ಕುಳಿತಿರಲು ಅದನ್ನು ಕಂಡು ಗಾಂಧೀಜಿಗೆ ಒಬ್ಬ ವೃದ್ಧ ಮಹಿಳೆ ನೆರವಾದಳು. ಅಲ್ಲಿಂದ ಪರಿಚಯವಾದ ಮಹಿಳೆ ಪ್ರತಿ ಭಾನುವಾರವೂ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಗಾಂಧೀಜಿಯನ್ನು ಒತ್ತಾಯಪಡಿಸಿದಳು. ಬೇರೆ ವಿಶೇಷ ದಿನಗಳಲ್ಲೂ ಅವರನ್ನು ಆಮಂತ್ರಿಸುತ್ತಿದ್ದಳು. ಗಾಂಧೀಜಿ ಲಜ್ಜಾಯುಕ್ತರಾಗಿರುವುದನ್ನು ಹೋಗಲಾಡಿಸುವುದಕ್ಕಾಗಿ ಯುವತಿಯರೊಂದಿಗೆ ಮಾತುಕತೆ ನಡೆಸುವಂತೆ ಯತ್ನಿಸುತ್ತಿದ್ದಳು. ಗಾಂಧೀಜಿಗೆ ಮಾತನಾಡುವುದೇ ಕಷ್ಟವಾಗಿ ತೋರುತ್ತಿತ್ತು. ವಿನೋದವಾಗಿ ಮಾತನಾಡುವುದಂತೂ ಅವರಿಂದ ಅಸಾಧ್ಯವೇ ಆಗಿತ್ತು.

ಅಲ್ಲಿನ ಒಬ್ಬ ಯುವತಿ ಗಾಂಧೀಜಿಯ ವಿಷಯದಲ್ಲಿ ಅಧಿಕ ಆದರ ತೋರುವಂತವರಿಗೆ ಕಂಡಿತು. ವೃದ್ಧ ಮಹಿಳೆ ಅವರಿಬ್ಬರ ಕೂಡುವಿಕೆಯನ್ನೇ ನಿರೀಕ್ಷಿಸುತ್ತಿದ್ದಳು. ಗಾಂಧಿ ಅಜ್ಜನಿಗೆ ಇದರ ಗುಟ್ಟು ತಿಳಿಯಿತು. ಈ ಸಂಕಟದಿಂದ ಪಾರಾಗುವುದಕ್ಕೆ ಯೋಚಿಸಿದರು."

"ಏನಣ್ಣಾ! ಅಲ್ಲಿಗೆ ಹೋಗುವುದನ್ನೇ ಬಿಟ್ಟುಬಿಟ್ಟರೇ?"

"ಹೋಗುವುದನ್ನು ಬಿಟ್ಟರೆ ಸಂಶಯಕ್ಕೆಡೆಯಾಗುವುದಿಲ್ಲವೇ? ಅದಕ್ಕಾಗಿ ಅವರಿಗೆ—ಅಮ್ಮಾ! ತಾವು ನನ್ನಲ್ಲಿ ಮಕ್ಕಳಂಥಾ ಮಮತೆಯಿಟ್ಟಿರುವಿರಿ. ನಾನು ಮದುವೆ ಮಾಡಿಕೊಳ್ಳಬೇಕೆಂದು ಯುವತಿಯರನ್ನು ನನ್ನೊಡನೆ ಬಿಡುತ್ತಿದ್ದೀರಿ. ಆದರೆ ಆ ಯೋಗ್ಯತೆ ನನ್ನಲ್ಲಿಲ್ಲ. ನಾನು ನಿಮಗೆ ಮೊದಲೇ ತಿಳಿಸಬೇಕಿತ್ತು. ನಾನು ಹುಡುಗನಾಗಿರುವಾಗಲೇ ನನಗೆ ಮದುವೆಯಾಗಿದ್ದು ಇಲ್ಲಿಗೆ ಬರುವಾಗಲೇ ನನಗೊಬ್ಬ ಮಗನಾಗಿರುವೆನೆಂದು ನಾನು ತಮಗೆ ತಿಳಿಸಿರಲಿಲ್ಲ. ಇಲ್ಲಿ ಎಲ್ಲರೂ ಮರೆ ಮಾಡುವಂತೆ ನಾನೂ ಮರೆ ಮಾಡಿದೆ. ಆದರೆ ಈಗಲಾದರೂ ತಮಗೆ ಸತ್ಯ ಸಂಗತಿಯನ್ನು ತಿಳಿಸುತ್ತಿರುವೆನೆಂದು ಸಂತೋಷವಾಗುತ್ತಿದೆ. ಈ ಪತ್ರ ತಮಗೆ ತಲಪಿದ ತರುವಾಯ ನಾನು ತಮ್ಮ ಆತಿಥ್ಯಕ್ಕೆ ಅಯೋಗ್ಯನೆಂದು ತಾವು ತಿಳಕೊಂಡರೆ ಅದಕ್ಕೆ ನಾನನ್ಯಥಾ ಭಾವಿಸಲಾರೆ. ನೀವು ನನ್ನ ಮೇಲೆ ಮಮತೆಯಿಟ್ಟು ನಿಮ್ಮನ್ನೆಂದೂ ಮರೆಯದಂತೆ ಚಿರಋಣಿಯನ್ನಾಗಿ ಮಾಡಿರುವಿರಿ – ಎಂದು ಪತ್ರ ಬರೆದರು.

"ಅಣ್ಣಾ! ಗಾಂಧೀಜಿ ಸತ್ಯ ಸಂಗತಿಯನ್ನು ತಿಳಿಸಿದುದಕ್ಕಾಗಿ ಅವರು ಬೇಸರಪಟ್ಟರೇ? ಗಾಂಧಿ ಅಜ್ಜನನ್ನು ಹೀನೈಸಿದರೇ?"

"ಇಲ್ಲ. ಗಾಂಧೀಜಿಗೆ ಮರುಟಪ್ಪಾಲಿಗೆ—ತಾವು ಮುಚ್ಚುಮರೆಯಿಲ್ಲದೆ ಬರೆದ ಪತ್ರ ಕಂಡು ತುಂಬಾ ಸಂತೋಷವಾಯಿತು. ಅಲ್ಲದೆ ನಗುವೂ ಬಂತು. ಸತ್ಯಸ್ಥಿತಿಯನ್ನು ತಿಳಿಸಿದುದು ಒಳ್ಳೆಯದೇ ಆಯಿತು. ಮೊದಲಿನಂತೆಯೇ ಸದಾ ತಾವಿಲ್ಲಿ ಬಂದು ಹೋಗಬಹುದು. ಬರುವ ಭಾನುವಾರ ತಮ್ಮನ್ನು ಇಲ್ಲಿ ಕಾದಿರುತ್ತೇವೆ. ಈ ಘಟನೆಯಿಂದ ನಮ್ಮ ಮೈತ್ರಿಗೆ ಏನೂ ಕುಂದಾಗದೆಂದು ಹೇಳುವ ಅಗತ್ಯವಿಲ್ಲ. ತಮ್ಮ ಬಾಲ್ಯ ವಿವಾಹದ ಕತೆ ಕೇಳಿ ನಕ್ಕು ಆನಂದಪಡುವ ಆಸೆಯಿದೆ—ಎಂದು ಮಹಿಳೆ

ಉತ್ತರ ಕೊಟ್ಟಳು. ಅವರ ಮೈತ್ರಿ ಇಂಗ್ಲೆಂಡಿನಲ್ಲಿರುವಷ್ಟು ಕಾಲವೂ ಇದ್ದಿತಲ್ಲದೆ ಆ ಬಳಿಕವೂ ಇದ್ದಿತಂತೆ. ಸತ್ಯದಿಂದ ಕೇಡಿಲ್ಲ ತಾನೆ."

"ಅಣ್ಣಾ! ಗಾಂಧಿ ಅಜ್ಜನ ದಾರಿ ಎಷ್ಟು ಸಭ್ಯ ಮತ್ತು ಸರಳ."

"ಗಾಂಧಿ ಅಜ್ಜ ಅಲ್ಲಿರುವಾಗಲೇ ಭಗವದ್ಗೀತೆಯನ್ನು ಓದತೊಡಗಿದರು. ದಿನದಿಂದ ದಿನಕ್ಕೆ ಅವರ ಜ್ಞಾನ ಅಭಿವೃದ್ಧಿಗೊಳ್ಳುತ್ತಿತ್ತು. ಅವರ ತಂದೆಯವರು ಜೀವಿಸಿದ್ದಾಗ ಮನೆಗೆ ನಾನಾ ಜಾತಿಯ ಬಂಧುಗಳು ಬರುತ್ತಿದ್ದುದರಿಂದ ಸರ್ವಧರ್ಮ ಸಮಾನಬುದ್ಧಿ ಗಾಂಧೀಜಿಯವರಲ್ಲಿ ಉಂಟಾಯಿತು. ಸನ್ಮಿತ್ರರ ಒಡನಾಟದಿಂದಲಾಗಿ ನಾನಾ ಧರ್ಮಗಳ ಪರಿಚಯವೂ ಆಯಿತು. ಅವರು ಏಸುಕ್ರಿಸ್ತನ ಉಪದೇಶಗಳನ್ನು ಭಗವದ್ಗೀತೆಗೆ ಹೋಲಿಸಿ ನೋಡಿದರು."

"ಕೇಡು ಮಾಡಿದವಗೆ ಅಡ್ಡ ಬರಬೇಡಿ. ಯಾರಾದರೂ ನಿಮ್ಮ ಬಲ ಕೆನ್ನೆಗೆ ಹೊಡೆದರೆ ಎಡ ಕನ್ನೆಯನ್ನು ತೋರಿಸಿರಿ. ಅಂಗಿಯನ್ನು ಕಿತ್ತುಕೊಂಡರೆ ನಿಮ್ಮ ಬಟ್ಟೆಯನ್ನು ಅವರಿಗೆ ಕೊಡಿರಿ—ಎಂಬ ಅವರ ತತ್ವವನ್ನು ಗಾಂಧೀಜಿ ಬಹಳ ಮೆಚ್ಚಿದರು."

"ಅಣ್ಣಾ! ದಾಸರ ಹಾಡು ಕೂಡ ಇದೇ ತತ್ವವನ್ನು ಬೋಧಿಸುತ್ತದಣ್ಣಾ! 'ವಿಷವನುಣಿಸಿದಗೆ ಷಡ್ರಸವನುಣಿಸಲು ಬೇಕು; ಹುಸಿದು ಮನೆ ಕೊಂಬುವನ ಹಾಡಿಹರಸಲು ಬೇಕು' ಎಂದೆಲ್ಲಾ ಪುರಂದರದಾಸರು ಹಾಡಿದ್ದಾರಣ್ಣಾ!"

"ತಮ್ಮಾ! ನೀನು ಬಲು ಜಾಣ. ಎಲ್ಲಾ ಒಳ್ಳೆಯ ಮಾತುಗಳೂ ನಿನಗೆ ಕಂಠ ಪಾಠವಾಗಿವೆಯಲ್ಲವೇ? ದಾಸ ಸಾಹಿತ್ಯ ನಿಜವಾಗಿ ಜ್ಞಾನದ ಗಣಿಯಾಗಿದೆ ತಮ್ಮಾ!"

"ಅಣ್ಣಾ! ಅದೆಲ್ಲಾ ಇರಲಿ. ಗಾಂಧೀಜಿಯ ಶಾಲೆಯ ಕತೆ ಹೇಗಿತ್ತಣ್ಣಾ!"

"ಸರಿ ಸರಿ. ಅದನ್ನು ಈ ತನಕ ನಿನಗೆ ಹೇಳಲೇ ಇಲ್ಲವಲ್ಲಾ! ಗಾಂಧೀಜಿಗೆ ಆ ವಿದ್ಯಾಭ್ಯಾಸ ಅಷ್ಟೇನೂ ಕಷ್ಟವಾಗಿ ಕಾಣಲಿಲ್ಲ. ವರ್ಷಗಳಲ್ಲಿ ನಿಯಮದಂತೆ ಪರೀಕ್ಷೆಗಳಾಗುತ್ತಿದ್ದವು. ಅಲ್ಲಿ ವರ್ಷಕ್ಕೆ ನಾಲ್ಕು

ಟರ್ಮ್‌ಗಳು ನಡೆಯುತ್ತಿದ್ದುವಂತೆ. ಟರ್ಮ್ ಕಳೆಯುವುದೆಂದರೆ ಭೋಜನಕ್ಕೆ ಹೋಗುವುದು ಪ್ರತಿಯೊಬ್ಬನೂ ಇಪ್ಪತ್ತನಾಲ್ಕರಲ್ಲಿ ಆರು ಭೋಜನಗಳ ಸಮಯಕ್ಕೆ ಸರಿಯಾಗಿ ಹೋಗಿ ಉಣ್ಣದಿದ್ದರೂ ಹಾಜರಿದ್ದು ಬರಬೇಕಿತ್ತು. ಅಲ್ಲಿ ಒಬ್ಬೊಬ್ಬನಿಗೆ ಎರಡು ಮೂರು ರೂಪಾಯಿಯ ಮದ್ಯಗಳನ್ನು ಕುಡಿಯ ಕೊಡುತ್ತಿದ್ದರು."

"ಅಣ್ಣಾ! ಇದೇನು ವಿಚಿತ್ರ. ಕಲಿಯುವುದೆಂದರೆ ಹೀಗೇನು?"

"ನಿಜವಾಗಿಯೂ ವಿಚಿತ್ರವೇ. ಈ ಊಟ ತಿಂಡಿಗಳಿಂದ ವಕೀಲನಾಗಲು ಯಾವ ಯೋಗ್ಯತೆ ಬರುತ್ತದೋ ದೇವರೇ ಬಲ್ಲ. ಅದು ಅಲ್ಲಿನ ಪದ್ಧತಿ."



"ಗಾಂಧಿ ಅಜ್ಜ ಅಲ್ಲಿ ಮದ್ಯ ಕುಡಿದರೇ?"

"ಅವರು ಮುಟ್ಟುತ್ತಿರಲಿಲ್ಲ. ಊಟದ ಬದಲಾಗಿ ಅವರೂ ಅವರ ಇನ್ನೊಬ್ಬ ಸಹಪಾಠಿಯೂ ಹಣ್ಣುಹಂಪಲುಗಳನ್ನು ಶಾಕಾಹಾರಿಗಳ ಸಲುವಾಗಿ ಕೊಡಬೇಕೆಂದು ಬೇಡಿಕೊಂಡರು. ಹಾಗೆಯೇ ಒಪ್ಪಿಗೆ ದೊರೆಯಿತು. ಹೀಗಿರುವುದರಿಂದ ತಮಾಷೆಗಾಗಿ ಬ್ಯಾರಿಸ್ಟರುಗಳನ್ನು ಊಟದ ಬ್ಯಾರಿಸ್ಟರುಗಳೆಂದೂ ನಗುತ್ತಿದ್ದರಂತೆ. ಶಾಲೆಯಲ್ಲಿ 'ರೋಮನ್ ಲಾ' ಮತ್ತು 'ಕಾಮನ್ ಲಾ' ಎಂಬೆರಡು ಕಾನೂನುಗಳನ್ನು ಮಾತ್ರ ಕಲಿಸುತ್ತಿದ್ದರು. ಇವುಗಳಲ್ಲಿ ನಡೆಯುವ ಪರೀಕ್ಷೆಗಳಿಗಾಗಿ ಬೇರೆ ನೋಟ್ಸ್ ದೊರೆಯುತ್ತಿದ್ದುದರಿಂದ ಅದು ಬಹು ಸುಲಭವಾಗಿತ್ತಂತೆ. ಆದರೂ ಗಾಂಧೀಜಿ ಮೂಲವನ್ನು ಸಂಪೂರ್ಣವಾಗಿ ತಿಳಿಯಬೇಕೆಂದು ಪರೀಕ್ಷೆಗಿಟ್ಟಿದ್ದ ಪುಸ್ತಕಗಳನ್ನೆಲ್ಲಾ ಶ್ರಮ ವಹಿಸಿ ಶ್ರದ್ಧಾಪೂರ್ವಕ ಓದಿದರು. ಅವರಿಗೆ ಅದು ಸ್ವಾರಸ್ಯವಾಗಿಯೂ ಕಂಡಿತಂತೆ."

"ಗಾಂಧೀಜಿಯ ಆಸೆ ಎಲ್ಲೆಡೆಯೂ ಬಹಳ ದೊಡ್ಡದಲ್ಲವೇ? ಅಣ್ಣಾ!"

"ಒಳ್ಳೆಯವರ ಲಕ್ಷಣವೇ ಅದು. ಉತ್ತಮರು ಎಲ್ಲವನ್ನೂ ಸರಿಯಾಗಿ ತಿಳಿದುಕೊಳ್ಳುವುದಕ್ಕೆ ಯತ್ನಿಸುವರು. ಗಾಂಧೀಜಿಗೆ ಹೇಗಾದರೂ ಪರೀಕ್ಷೆಯಲ್ಲಿ ಪಾಸಾದರೆ ಸಾಕು ಎಂಬ ಅಭಿಪ್ರಾಯವಿರಲಿಲ್ಲ. ಪರೀಕ್ಷೆಯಲ್ಲಿ

ಉತ್ತೀರ್ಣನಾಗುವುದು ಬಹು ಸುಲಭವೆಂದು ಅವರು ಮೊದಲೇ ಮನಗಂಡಿದ್ದರು."

"ಜಾಣರಪ್ಪಾ! ಅವರು ಪರೀಕ್ಷೆಯಲ್ಲಿ ಒಂದೇ ಬಾರಿಗೆ ಉತ್ತೀರ್ಣರಾದರೇನಣ್ಣಾ?"

"ಉತ್ತೀರ್ಣರಾಗದಿರುತ್ತಾರೇನು?"

"ದುರದೃಷ್ಟವಶಾತ್ ಎಲ್ಲಾದರೂ ಫೈಲಾದರೆ! ಎಂದು ಪ್ರಶ್ನಿಸಿದೆ."

"ಇಲ್ಲ. ಗಾಂಧೀಜಿ ಬಹಳ ಚುರುಕಾಗಿದ್ದರು. ಅವರು ಮೊಕದ್ದಮೆಗಳ ವಿಚಾರವನ್ನು ಆನಂದದಿಂದ ಓದುತ್ತಿದ್ದರು. ಕೆಲವು ಮೊಕದ್ದಮೆಗಳನ್ನು ಓದುವುದೆಂದರೆ ಕಾದಂಬರಿಯನ್ನು ಓದಿದಂತೆಯೇ ಆನಂದವುಂಟಾಗುತ್ತಿತ್ತಂತೆ."

"ಅಣ್ಣಾ! ಹೇಗಾದರೂ ಪರೀಕ್ಷೆಯಲ್ಲಿ ಪಾಸಾದರೆ ಸಾಕೆಂದು ಓದುವ ಮಕ್ಕಳೇ ಅಧಿಕ ಹೊರತು ಜ್ಞಾನಕ್ಕಾಗಿ ಓದುವ ಮಕ್ಕಳ ಸಂಖ್ಯೆ ಕಡಮೆಯಲ್ಲವೇ?"

"ಆದ್ದರಿಂದಲೇ ಮಕ್ಕಳ ತಿಳುವಳಿಕೆಯೂ ಕಡಮೆ. ಹೆತ್ತವರ ಕಾಟಕ್ಕೆ ಹೊತ್ತು ಕಳೆಯಲು ಶಾಲೆಗೆ ಹೋಗುವ ಮಕ್ಕಳು ಮತ್ತೆಷ್ಟು ಜ್ಞಾನವಂತರಾಗುವರು?"

"ನಿಜ, ಕಷ್ಟಪಡದೆ ವಿದ್ಯೆ ಬರದು; ಸುಮ್ಮಗೆ ಜ್ಞಾನಿಯಾಗಲಾರನು."

"ಗಾಂಧೀಜಿ ೧೮೯೧ನೇ ಜೂನ್ ಹತ್ತರಂದು ಬ್ಯಾರಿಸ್ಟರಾದರು. ಹನ್ನೊಂದರಂದು ಅವರನ್ನು ಇಂಗ್ಲೆಂಡಿನ ಹೈಕೋರ್ಟಿನ ವಕೀಲನನ್ನಾಗಿ ಮಾಡಿದರು. ಹನ್ನೆರಡರಂದು ಭಾರತಕ್ಕೆ ಹಿಂತಿರುಗಿದರು."

"ಪಾಪ! ಅಮ್ಮನನ್ನೂ ಅಣ್ಣನನ್ನೂ ಹೆಂಡತಿಯನ್ನೂ ಮಗುವನ್ನೂ ಕಾಣಲು ತುಂಬಾ ಆತುರ ಇದ್ದಿರಬಹುದು ಅಲ್ಲವೇ?"

"ಬಹುದು, ಏನು? ಇತ್ತು."

---

— ೫ —

“ತಮ್ಮಾ! ‘ಅಸ್ಸಾಂ’ ಎಂಬ ಹಡಗದಲ್ಲಿ ಗಾಂಧೀಜಿ ಮುಂಬೈಗೆ ಬಂದು ಸೇರಿದರು. ಸಮುದ್ರವು ಅಲ್ಲೋಲಕಲ್ಲೋಲವಾಗಿತ್ತು. ಹೇಗೂ ದೋಣಿಯಿಂದ ದಡವನ್ನು ಸೇರಿದರು. ಅಲ್ಲಿ ಅವರನ್ನು ದುಃಖಕರವಾದ ವಾರ್ತೆಯೊಂದು ಕಾದಿತ್ತು.”

“ಅದೇನಣ್ಣಾ! ಎಲ್ಲರನ್ನೂ ಕಾಣುವ ಭಾಗ್ಯ ಸಮೀಪಿಸಿತೆಂದು ಆನಂದದಲ್ಲಿ ಹಿಂತಿರುಗುತ್ತಿದ್ದ ನಮ್ಮಜ್ಜನಿಗೆ ದುಃಖವೇ ಬಂದೊದಗಿತೇ? ಅದೇಕೆ?”

“ಗಾಂಧೀಜಿಗೆ ತಂದೆ ತೀರಿಕೊಂಡಾಗ ಆದ ವ್ಯಥೆಗಿಂತ ತಾಯಿಯವರು ಸ್ವರ್ಗಸ್ಥರಾದರೆಂಬ ಈ ಸುದ್ದಿ ಹೆಚ್ಚಿನ ಖೇದವನ್ನು ತಂದಿತು. ತಾಯಿ ಮೊದಲೇ ದಿವಂಗತರಾಗಿದ್ದರೂ ದೂರ ದೇಶದಲ್ಲಿರುವ ಸಹೋದರನು ಈ ಮರಣ ವಾರ್ತೆಯನ್ನು ತಿಳಿದರೆ ದುಃಖದಿಂದ ದಿಕ್ಕುಗಾಣದಾಗಬಹುದೆಂದೇ ಅವರ ಅಣ್ಣ ತಿಳಿಸಿರಲಿಲ್ಲ.”

“ಪಾಪ! ತನ್ನನ್ನು ಹಡೆದ ಪುಣ್ಯಮಾತೆಯನ್ನು ಕೊನೆಗಾಲದಲ್ಲೊಮ್ಮೆ ನೋಡುವ ಭಾಗ್ಯವೂ ಇಲ್ಲದೇ ಹೋಯಿತಲ್ಲಾ ಎಂದು ಎಷ್ಟು ಮರುಗಿದರೋ ಏನೋ?”

“ತಾಯಿ ಪ್ರತಿಜ್ಞೆ ಮಾಡಿಸಿದ ದಿನವೇ ಸುದಿನವೆಂದು ಗ್ರಹಿಸಿದ ಗಾಂಧೀಜಿಗೆ ಮರಳಿ ಬಂದಾಗ ತಾಯಿಯನ್ನು ಕಾಣಲಾಗಲಿಲ್ಲವೆಂಬ ಚಿಂತೆ ತುಂಬಾ ವೇದನೆಯನ್ನಿತ್ತಿರಬಹುದು. ವಿಲಾಯತಿಯಲ್ಲಿರುವ ಹೊತ್ತಿಗೆ ಅವರಿಗೆ ಪ್ರೇಮಮೂರ್ತಿಯಾದ ತಾಯಿಯು ನೆನಪಾಗಿ ಕಣ್ಣ ಮುಂದೆ ನಿಂತಿರುವಂತೆ ಭಾಸವಾಗುತ್ತಿದ್ದಿತಲ್ಲವೇ? ಆತ್ಮವಿಕಾಸಕ್ಕೂ, ಸತ್ಯಶೋಧನೆಗೂ, ಅಹಿಂಸೆಗೂ, ಈಶ್ವರನಲ್ಲಿಡತಕ್ಕ ಅಚಲ ವಿಶ್ವಾಸಕ್ಕೂ ಗಾಂಧೀಜಿಗೆ ಎಡೆ ಕಲ್ಪಿಸಿಕೊಟ್ಟ ಪುಣ್ಯಮಾತೆ ಪುತಲೀಬಾಯಿಯವರ ಈ ಮರಣವಾರ್ತೆ ಯುರೋಪಿನಲ್ಲಿರುವಾಗ ತಿಳಿದಿದ್ದರೆ ಇನ್ನೂ ಕಷ್ಟವಾಗುತ್ತಿತ್ತು. ಡಾಕ್ಟರ್ ಮೆಹತಾ ಗಾಂಧೀಜಿಯನ್ನು ಸ್ವಾಗತಿಸಿ ಮನೆಗೆ ಕರೆದೊಯ್ದು ಸ್ನಾನ ಮಾಡಿಸಿ ಧೈರ್ಯ ಹೇಳಿ ಉಪಚರಿಸಿದರು. ಅಲ್ಲಿಂದ ರಾಜಕೋಟೆಗೆ ತೆರಳಿದರು.”

"ಅಣ್ಣಾ! ಬ್ಯಾರಿಸ್ಟರ್ ಆಗಿ ಬರುವ ತಮ್ಮನನ್ನು ನೋಡಿ ಅಣ್ಣನಿಗೆ ಹೇಳಿ ತೀರದ ಆನಂದವಾಗಿರಬಹುದಲ್ಲವೇ?"

"ಆಗದೆ ಇದ್ದೀತೇನು? ತಮ್ಮನು ವಕಾಲತು ನಡೆಸಿಯಾನು; ಕೋರ್ಟಿಗೆ ಹೋದಾನು; ಒಳ್ಳೆಯ ಹೆಸರನ್ನು ತಂದಾನು; ಇತ್ಯಾದಿ ಕಲ್ಪನೆಗಳು ಅವರಲ್ಲಿ ಸ್ವಾಭಾವಿಕವಾಗಿದ್ದವು. ಆದರೆ ಗಾಂಧಿ ಅಜ್ಜನಿಗೆ ತನ್ನ ತಿಳುವಳಿಕೆ ಏನೂ ಸಾಲದೆಂದು ತೋರುತಿತ್ತು. ಅವರು ಹಿಂದೂದೇಶಕ್ಕೆ ಸಂಬಂಧಿಸಿದ ಯಾವ ಕಾನೂನನ್ನು ಓದಿರಲಿಲ್ಲ ತಾನೆ. ಹಿಂದುಗಳಿಗೂ ಮುಸಲ್ಮಾನರಿಗೂ ಸಂಬಂಧಿಸಿದ ಕಾನೂನುಗಳು ಯಾವುದೆಂದರಿಯದೆ ಇಲ್ಲಿ ಅವರು ಹೇಗೆ ತಾನೆ ವ್ಯವಹಾರ ನಡೆಸಬಹುದು? ಆ ಬಗ್ಗೆ ಇಲ್ಲಿಯ ಕಾನೂನು ಪುಸ್ತಕಗಳನ್ನು ಓದಬೇಕಾಯಿತು."

"ಅಂತೂ ಆ ಬಳಿಕವಾದರೂ ಅಲ್ಲೇ ವಕೀಲರಾಗಿ ಅಣ್ಣನಿಗೆ ನೆರವಾದರೇ?"

"ಕಾನೂನು ಓದಿ ಕೋರ್ಟಿನಲ್ಲಿ ವಾದಿಸುವುದಕ್ಕೆ ಕಲಿಯಬೇಡವೇ? ಬೊಂಬಾಯಿಯಲ್ಲಿ ಚೆನ್ನಾಗಿ ಅಭ್ಯಾಸ ಮಾಡಿ ಬರಲೆಂದು ಅವರನ್ನು ಅವರ ಅಣ್ಣ ಬೊಂಬಾಯಿಗೆ ಕಳುಹಿ ಕೊಟ್ಟರು."

"ಗಾಂಧೀಜಿಯ ಅಣ್ಣ ಎಷ್ಟೊಳ್ಳೆಯ ಅಣ್ಣ."

"ಅಂದರೆ ನಾನು ಕೆಟ್ಟವನೇ?"

"ಅಲ್ಲಣ್ಣಾ! ನೀವು ತುಂಬಾ ಒಳ್ಳೆಯವರು. ಅಣ್ಣಾ! ನೀವು ನನ್ನ ಜೀವ ಅಲ್ಲವೇನು?"

"ನೀನು ಮಾತಿನಲ್ಲಿ ಬಲು ಜಾಣ."

"ಆದರೆ ಕಾರ್ಯದಲ್ಲಿ ಹಿಂದೇನು? ನೀವು ಹೇಳಿದ ಹಾಗೆ ಮಾಡುವುದಿಲ್ಲವೇ?"

"ಮಾಡಿಲ್ಲವೆಂದಿಲ್ಲ ತಾನೆ. ಆದ್ದರಿಂದಲೇ ನೀನು ಜಾಣ ಎಂದೆ."

"ಅಣ್ಣಾ! ಬೊಂಬೈಯಲ್ಲಿ ಅಭ್ಯಾಸ ಮಾಡಿ ಒಳ್ಳೆಯ ವಕೀಲರೆನಿಸಿದರೇ?"

"ಅದನ್ನೂ ಹೇಳುವೆ ಕೇಳು. ಎದುರು ಕಡೆಯ ವಕೀಲರ ಮುಂದೆ ನಿಂತು ವಾದಿಸುವುದಕ್ಕೆ ಗಾಂಧೀಜಿಗೆ ಧೈರ್ಯ ಸಾಲದು. ಅಡ್ಡ ಸವಾಲುಗಳನ್ನು ಹಾಕಿ ಸೋಲಿಸುವುದಂತೂ ಹೇಗೆಂದು ಅರಿಯದು. ತಾನು ವಕೀಲನಾದೆನೇನೋ ನಿಜ, ಆದರೆ ಈ ಉದ್ಯೋಗವನ್ನು ತನ್ನಿಂದ ನಡೆಸುವುದು ಸಾಧ್ಯವೇ ಎಂದವರಿಗೆ ಕಾಣುತಿತ್ತು."

"ಕಾರ್ಯಕ್ಕೆ ತೊಡಗುವ ಮೊದಲು ಸಂದೇಹವಿರುತ್ತದೆ, ಮಾಡುವುದೇನು?"

"ಗಾಂಧೀಜಿ ಒಂದನೇ ಮೊಕದ್ದಮೆಯಲ್ಲಿ ನಿರಾಶೆ ಹೊಂದಿದರು. ಹೇಳಲಾರದ ನಾಚಿಕೆಯಾಯಿತು?"

"ಏನು? ವಿರೋಧ ಪಕ್ಷಕ್ಕೇ ಜಯ ಸಿಕ್ಕಿತೇ? ಹಾಗಿದ್ದರೆ ಅಷ್ಟು ವ್ಯಥೆಪಡುವಂತಿರಲಿಲ್ಲ."

"ಮತ್ತೇನಾಯಿತು?"

"ನ್ಯಾಯಾಧೀಶರ ಮುಂದೆ ವಾದಿಸುವದಕ್ಕಾಗಿ ಕೋರ್ಟಿನಲ್ಲಿ ಎದ್ದು ನಿಂತುದೇ ತಡ, ಅವರಿಗೆ ಬಾಯಿಯಿಂದ ಮಾತು ಹೊರಡದಾಯಿತು. ಕೈಕಾಲುಗಳು ಗಡಗಡನೆ ಕಂಪಿಸತೊಡಗಿದವು."

"ಮತ್ತೇನು ಮಾಡಿದರಣ್ಣಾ!"

"ತನ್ನಿಂದ ವ್ಯವಹರಿಸುವುದು ಅಸಾಧ್ಯವೆಂದು ಕುಳಿತೇ ಬಿಟ್ಟರು. ವಕಾಲತು ಫೀಸನ್ನು ಹಿಂದೆ ಕೊಟ್ಟು ಬೇರೆಯವರೊಡನೆ ಹೋಗುವಂತೆ ಹೇಳಿದರು."

"ಅಣ್ಣಾ! ಹೀಗಾದರೆ ಬಹು ಕಷ್ಟವಾಯಿತಲ್ಲವೇ? ಗಾಂಧೀಜಿಗೆ ಮತ್ತಾರು ತಾನೆ ವಕಾಲತನ್ನು ಕೊಡುವರು?"

"ಸತ್ಯ. ಗಾಂಧೀಜಿಗೆ ವಕಾಲತು ದೊರೆಯುತ್ತಿರಲಿಲ್ಲ. ಯಾರಾದರೂ ತಾನು ಸೋಲಬೇಕೆಂದೇ ಅವರಿಗೆ ವಕಾಲತು ಕೊಡಬೇಕು ಹೊರತು ತನ್ನ ವ್ಯಾಜ್ಯದಲ್ಲಿ ಗೆಲ್ಲುವುದಕ್ಕಾಗಿ ವಕಾಲತು ಕೊಡುವುದಂತೂ ಎಣಿಸಲಾರದ ವಿಷಯವೇ ಆಯಿತು."

"ಆದರೆ ಅಲ್ಲಿನ ಖರ್ಚು ಹೇಗೆ ಸಾಗಬೇಕು. ಮತ್ತೇನು ಮಾಡಿದರು?"

"ಕೋರ್ಟಿಗೆ ಹೋಗುವುದಂತೂ ಅಸಾಧ್ಯವಾಯಿತು. ಅರ್ಜಿಯನ್ನು ಬರೆಯತೊಡಗಿದರು."

"ಪಾಪ! ಬ್ಯಾರಿಸ್ಟರಾಗಿಯೂ ಏನೂ ಪ್ರಯೋಜನವಿಲ್ಲವೆಂದಾಯಿತೇ?"

"ನಿಜವಾಗಿಯೂ ಗಾಂಧೀಜಿಗೆ ತಾನು ವಕೀಲನಾಗಲು ಅಯೋಗ್ಯನೆಂದು ಕಂಡಿತು. ಅವರಿಗೆ ಇಂಗ್ಲೀಷ್ ಚೆನ್ನಾಗಿ ಬರುತ್ತಿತ್ತು. ಆದ್ದರಿಂದ ಈ ಯೋಚನೆಯನ್ನು ಬಿಟ್ಟು ಯಾವುದಾದರೊಂದು ಶಾಲೆಯಲ್ಲಿ ಮೆಟ್ರಿಕ್ ಪರೀಕ್ಷೆಗೆ ಪಾಠ ಹೇಳಬಲ್ಲೆನೆಂದು ಕಂಡಿತು. ಈ ರೀತಿ ಯೋಚಿಸುತ್ತಿರುವಾಗಲೇ ಪತ್ರಿಕೆಯೊಂದರಲ್ಲಿ ಇಂಗ್ಲೀಷ್ ಪಾಠವನ್ನು ಹೇಳುವ ಬಗ್ಗೆ ಅಧ್ಯಾಪಕನು ಬೇಕೆಂಬ ಜಾಹೀರನ್ನು ಕಂಡರು. ಅವರು ಅರ್ಜಿ ಬರೆದರು. ಆರ್ಡರ್ ಬಂದಿತು."

"ಆದರೆ ಗಾಂಧಿ ಅಜ್ಜ ಮಾಸ್ತ್ರ ಆಗಿದ್ದರೇನು?"

"ಇಲ್ಲ. ಹೋದಾಗ ಗಾಂಧೀಜಿ ಬಿ. ಎ. ಆಗದ ಕಾರಣ ಹಿಂದಕ್ಕೆ ಕಳುಹಿದರು. ಗಾಂಧೀಜಿ ಲಂಡನ್ ಮೆಟ್ರಿಕ್ ಪಾಸಾಗಿದ್ದರೂ ಅವರ ಎರಡನೇ ಭಾಷೆ ಲೇಟಿನ್ ಆಗಿದ್ದರೂ ಅವರು ಪದವೀಧರರನ್ನೇ ಅಪೇಕ್ಷಿಸಿದ್ದ ಕಾರಣ ಗಾಂಧೀಜಿಯ ಶ್ರಮ ವ್ಯರ್ಥವಾಯಿತು. ನಿರಾಶೆಯು ಕಾರ್ಮೋಡ ಜೀವನದಲ್ಲೇ ಕವಿದಿರುವಂತೆ ಕಂಡಿತು. ಮುಂದಿನ ಗತಿಯೇನೆಂದು ಅವರಿಗರಿಯದು. ತನ್ನ ಸ್ಥಿತಿಗಾಗಿ ಮರುಗಿಕೊಂಡರು. ಪಾಪ. ಅವರ ಅಣ್ಣನಿಗೂ ತುಂಬಾ ಚಿಂತೆಯಾಯಿತು. ಬೊಂಬೈಯಲ್ಲಿ ಅಭ್ಯಾಸಕ್ಕಾಗಿ ಕೋರ್ಟಿಗೆ ಹೋಗಿ ಬೇಸರಗೊಂಡು ಬಾಯಾಕಳಿಸಿ ಬರುವುದಿಷ್ಟೇ ಅವರ ಕೆಲಸವಾಯಿತು. ಗಾಂಧೀಜಿ ಐದಾರು ತಿಂಗಳಿಗಿಂತ ಹೆಚ್ಚು ಕಾಲ ಅಲ್ಲಿರಲಿಲ್ಲ. ಗಾಂಧೀಜಿ ರಾಜಕೋಟೆಗೆ ಹಿಂತಿರುಗಿದರು."

"ಬಂದೇನು ಮಾಡಿದರಣ್ಣಾ!"

"ಅರ್ಜಿಗಳನ್ನು ಬರೆಯುತ್ತಿದ್ದರು. ಇದರಿಂದ ಸ್ವಲ್ಪ ಹಣ ಸಂಪಾದನೆಯಾಗುತ್ತಿತ್ತು. ಬ್ಯಾರಿಸ್ಟರನಾಗಿ ಹೀಗೆಯೇ ಕಾಲ ಕಳೆಯುವುದಕ್ಕಾಗು

ತ್ತದೆಯೇ? ಎಲ್ಲಿ ಹೋಗಿ ಏನು ಮಾಡಲಿ ಎಂಬ ವಿಚಾರವೇ ಅವರಲ್ಲಿ ದೊಡ್ಡ ಸಮಸ್ಯೆಯಾಗಿ ಉಳಿಯಿತು. ಆದರೆ ಗಾಂಧೀಜಿಗೆ ದೇವರು ಕಷ್ಟಗಳನ್ನು ಅನುಭವಕ್ಕಾಗಿಯೇ ಮೇಲಿಂದ ಮೇಲೆ ಕೊಟ್ಟರು. ಕಷ್ಟಗಳ ಅನುಭವದಿಂದಲೇ ಅವರ ಆತ್ಮಶಕ್ತಿ ಬೆಳೆಯುತ್ತಾ ಬಂದಿತು."

"ಅಣ್ಣಾ! ಅವರಿಗೆ ದೇವರು ಯಾವ ದಾರಿಯನ್ನು ತೋರಿದರು. ಬೇಗನೆ ಹೇಳಿರಿ."

"ತಮ್ಮಾ! ದೇವರು ಎಂದೂ ಕೈಬಿಡಲಾರ. ಗಾಂಧೀಜಿಯಿಂದ ಮಾಡಿಸತಕ್ಕ ಕೆಲಸಗಳನೇಕ ಇದ್ದವು. ಕಷ್ಟಪಟ್ಟಾಗಲೇ ಮನುಷ್ಯನಲ್ಲಿ ಸಹನಾಶಕ್ತಿಯುಂಟಾಗಬೇಕು. ಇಡೀ ಜೀವನವನ್ನೇ ಮಹಾತ್ಮರು ಅನ್ಯರ ಕಷ್ಟನಿವಾರಣೆಗಾಗಿ ಧಾರೆಯೆರೆಯಬೇಕಾಗಿದೆ. ಆ ಕಷ್ಟಗಳ ಸಹನೆಯ ಬಗ್ಗೆ ನಮ್ಮಜ್ಜನಿಗೆ ಇದೆಲ್ಲಾ ದೇವರು ಕೊಟ್ಟ ಶಿಕ್ಷಣವಿರಬೇಕು. ಗಾಂಧೀಜಿಯೂ ಅವರ ಅಣ್ಣನೂ ಮುಂದೇನು ಮಾಡಲೆಂದು ಚಿಂತಿಸುತ್ತಿರುವ ಸಮಯಕ್ಕೆ ಆಫ್ರಿಕಕ್ಕೆ ಗಾಂಧೀಜಿಯನ್ನು ಕಳುಹಿ ಕೊಡಬೇಕೆಂದು ಅಲ್ಲಿ ವ್ಯಾಪಾರ ನಡೆಸುತ್ತಿದ್ದ ವ್ಯಾಪಾರಿಗಳು ಕೇಳಿಕೊಂಡರು."

"ದಕ್ಷಿಣ ಆಫ್ರಿಕಕ್ಕೆ ಏಕೆ ಕರೆದರಣ್ಣಾ! ಲೆಕ್ಕ ಬರೆದು ಗುಮಾಸ್ತನಾಗಲೇ?"

"ತಮಾಷೆಯ ಪ್ರಶ್ನೆಯನ್ನೇ ಕೇಳುತ್ತಿರುವೆಯಲ್ಲಾ! ಅಲ್ಲಿ ದೊಡ್ಡ ವ್ಯಾಜ್ಯವೊಂದು ನಡೆಯುತ್ತಿತ್ತು. ಅಲ್ಲಿ ಆ ವ್ಯಾಪಾರಿಗಳ ಕಡೆಯಿಂದ ತುಂಬಾ ಬ್ಯಾರಿಸ್ಟರುಗಳು ವಕಾಲತು ನಡೆಸುತ್ತಿದ್ದರು. ತಮ್ಮೂರಿನವನೇ ಆದ ಬ್ಯಾರಿಸ್ಟರ್ ಇರುವಾಗ ಅಲ್ಲಿ ಸ್ವಲ್ಪ ಉಪಕಾರವೇ ಆದೀತು. ಅಲ್ಲದೆ ಗಾಂಧೀಜಿಗೂ ಸ್ವಲ್ಪ ಉಪಯೋಗವಾಗಬಹುದೆಂದು ಮಮತೆಯಿಂದ ಕೇಳಿಕೊಂಡರು. ಗಾಂಧೀಜಿಗೆ ಸಂತೋಷವೂ ಆಯಿತು. ಸಂಶಯವೂ ಉಂಟಾಯಿತು. ತಾನು ಅಲ್ಲಿ ಹೋಗಿ ವಕೀಲರಿಗೆ ಸಹಾಯಕನಾದರೆ ಸಾಕೇ? ಅಥವಾ ಕೋರ್ಟಿಗೂ ಹೋಗಬೇಕಾದೀತೇ? ಎಂದು ಅವರನ್ನು ಕೇಳ ಬಂದ ಸೇಟುಗಳೊಡನೆ ಪ್ರಶ್ನೆ ಮಾಡಿದರು."

"ಅದೇಕೆ? ಗಾಂಧಿ ಅಜ್ಜನಿಗೆ ಮತ್ತೂ ಗಾಬರಿಯಾಗುತ್ತಿತ್ತೇ?"

"ಹೌದು. ಅಲ್ಲಿ ಹೋಗಿ ಕೆಲಸವನ್ನು ಸಾಧಿಸಿ ಬರಬೇಕಲ್ಲವೇ? ಉತ್ತಮನಾದವನು ಮಾಡುತ್ತೇನೆಂದು ಒಪ್ಪಿ ಮತ್ತೆ ಮೋಸ ಮಾಡಲಾರ. ತನ್ನಿಂದಾಗದ ಕೆಲಸವನ್ನೆಂತೂ ಒಪ್ಪಿಕೊಳ್ಳುವಂತಿಲ್ಲ."

"ಅಣ್ಣಾ! ಗಾಂಧೀಜಿಯ ಅಧೈರ್ಯವನ್ನು ಕಂಡು ಅವರಿಗೂ ಸಂದೇಹ ವುಂಟಾಗಲಿಲ್ಲವೇ?"

"ಗಾಂಧೀಜಿಯನ್ನು ಅವರು ಚೆನ್ನಾಗಿ ಬಲ್ಲವರಿದ್ದರು. ಗಾಂಧೀಜಿ ಕೋರ್ಟಿಗೆ ಹೋಗದಿದ್ದರೂ ಚೆನ್ನಾಗಿ ಇಂಗ್ಲೀಷಿನಲ್ಲಿ ವ್ಯವಹಾರ ಮಾಡಬಲ್ಲ ರೆಂದು ಅವರಿಗೆ ಗೊತ್ತಿದ್ದಿತು. ಗಾಂಧೀಜಿ ತಾನು ಅಲ್ಲಿಗೆ ಹೋಗಿ ಏನು ಮಾಡಲಿ ಎಂದು ಕೇಳಿದರೂ ಅವರೇ ಸಮಾಧಾನ ಪಡಿಸಿ ಹೋಗುವಂತೆ ಪ್ರೋತ್ಸಾಹಿಸಿದರು. ಅಲ್ಲಿ ತುಂಬಾ ವ್ಯಾಪಾರ ನಡೆಯುತ್ತಿರುವುದರಿಂದ ತಾವು ವ್ಯಾಪಾರಕ್ಕೂ ತುಂಬಾ ಸಹಾಯ ಮಾಡಬಹುದು. ಪತ್ರವ್ಯವಹಾರ ಗಳ ಕೆಲಸವೆಲ್ಲಾ ತಮಗೇ ದೊರೆಯುವುದೆಂದು ಗಾಂಧೀಜಿಗೆ ಅವರು ತಿಳಿಯ ಪಡಿಸಿದರು."

"ಪಾಪ! ಗಾಂಧಿ ಅಜ್ಜನಿಗೆ ತುಂಬಾ ಆನಂದವಾಗಿರಬಹುದು. ಹೊಸ ಊರಿಗೆ ಯಾರಾದರೂ ತಾವಾಗಿ ಒತ್ತಾಯಪೂರ್ವಕ ಕಳುಹಿಕೊಡುವುದಾದರೆ ನಾನು ಮೊದಲಾಗಿ ಹೋಗುತ್ತಿದ್ದೆ."

"ಅಂದರೆ ನಾನು ನಿನ್ನನ್ನು ಬೇರೆ ಬೇರೆ ಊರು ನೋಡುವುದಕ್ಕೆ ಕಳುಹಿ ಕೊಡುವುದಿಲ್ಲವೆಂದು ನನ್ನ ಮೇಲೊಂದು ದೂರೇ?"

"ನಾನು ಹೇಳಿದ್ದಕ್ಕೆಲ್ಲಾ ನೀವು ಹಾಗೆಲ್ಲಾ ಅರ್ಥ ಮಾಡಿಕೊಳ್ಳಬಾರ ದಣ್ಣಾ! ನಾನು ಕೇಳಿದಾಗಲೆಲ್ಲಾ ಬೇಕಾದ್ದಕ್ಕೆಲ್ಲಾ ಹಣ ಕೊಡುತ್ತೀರಿ. ಎಲ್ಲಾದರೂ ನಿಮ್ಮೊಟ್ಟಿಗೆ ಬರುತ್ತೇನೆಂದರೆ ಕರೆದುಕೊಂಡು ಹೋಗುತ್ತೀರಿ. ಅದಕ್ಕಿಂತ ಹೆಚ್ಚು ಖರ್ಚು ಮಾಡುವುದಕ್ಕೆ ನಾವು ಬಡವರು ಎಂದು ನನಗೆ ಗೊತ್ತಿದೆಯಣ್ಣಾ! ನಾನು ನನ್ನಣ್ಣನ ವಿಚಾರದಲ್ಲಿ ಹಾಗೆಣಿಸುವುದುಂಟೇ?"

"ತಮ್ಮಾ! ನಿನ್ನನ್ನೂ ನಾನು ಚೆನ್ನಾಗಿ ಬಲ್ಲೆ. ಹೀಗೆ ತಮಾಷೆ ಗಾಗಿಯೇ ಕೇಳಿದೆ. ಗಾಂಧಿ ಅಜ್ಜನಿಗೆ ಹೊಸ ಊರನ್ನು ನೋಡುವ ಆಸೆ ಯಿತ್ತು. ಅವರ ಇಚ್ಛೆಗೂ ದೈವಸಂಕಲ್ಪಕ್ಕೂ ಸರಿ ಹೋಯಿತು. ಅವರು

ವಿದ್ಯಾಭ್ಯಾಸ ಮಾಡುವಾಗಲೇ ಬೇರೆ ಬೇರೆ ಊರುಗಳನ್ನು ತಿರುಗಾಡಿ ಬರ ಬೇಕೆಂದು ಆಸೆಪಡುತ್ತಿದ್ದರು."

"ಅಣ್ಣಾ! ಬೇರೆ ಬೇರೆ ಊರುಗಳನ್ನು ನೋಡಿದ್ದರಿಂದ ಏನು ಪ್ರಯೋ ಜನ? ಪೇಟೆ ನೋಡುವುದಕ್ಕೇನು?"

"ಪೇಟೆ ನೋಡಲು ಗಾಂಧಿ ಅಜ್ಜ ಆಸೆಪಡಲಿಲ್ಲ. ಅದೆಲ್ಲಾ ಮಕ್ಕಳ ಆಸೆ. ಬಸ್ಸಿನ ಪೋಂ ಪೊಂ ಸದ್ದು ಕೇಳಿದರೆ ನೋಡಲು ಓಡಿ ಬರು ವವರು ಮಕ್ಕಳಲ್ಲವೇ? ಪೇಟೆ ನೋಡುವುದಕ್ಕೇನಿದೆ? ದೊಡ್ಡ ದೊಡ್ಡ ಕಟ್ಟಡಗಳು ಎತ್ತರಕ್ಕೆ ನಿಂದಿರಬಹುದು ಅಷ್ಟೆ. ಜನರ ನಡೆ ನುಡಿ ಆಚಾರ ವಿಚಾರಗಳನ್ನು ತಿಳಿಯುವುದಕ್ಕಾಗಿ ಅವರು ಆಸೆ ಪಟ್ಟಿದ್ದರು. ಯಾವ ಊರಿನ ಜನರು ಯಾವ ರೀತಿಯಿಂದ ಜೀವನ ನಿರ್ವಹಣ ಮಾಡುತ್ತಿದ್ದಾರೆ; ಅವರ ನಾಗರಿಕತೆಯೇನು ಇತ್ಯಾದಿ ತಿಳಿದುಕೊಳ್ಳಬೇಡವೇ? ಜ್ಞಾನವಂತ ನಾಗಲು ಎಲ್ಲಾ ಅನುಭವವೂ ಬೇಕಷ್ಟೆ. ಆಫ್ರಿಕಕ್ಕೆ ಹೋದರೆ ಅಲ್ಲಿನ ಎಲ್ಲಾ ಖರ್ಚನ್ನೂ ನೋಡಿಕೊಳ್ಳುವುದಾಗಿಯೂ ವಸತಿಗೆ ಅವರ ಬಂಗ ಲೆಯೇ ದೊರೆಯುವುದೆಂದೂ ಹೇಳಿದರು. ಅವರ ಖರ್ಚೆಲ್ಲಾ ಹೋಗಿ ೧೦೫ ಪೌಂಡ್ ಸಂಬಳವೂ ದೊರೆಯುವುದಾಗಿ ಸೇಟುಗಳು ತಿಳಿಸಿದರು."

"ಗಾಂಧಿ ಅಜ್ಜನಿಗೆ ಖರ್ಚೆಲ್ಲಾ ಹೋಗಿ ಅಷ್ಟು ಸಂಬಳ ಮತ್ತೇಕಣ್ಣಾ! ಅವರ ಅಣ್ಣನಿಗೆ ಕಳುಹಿ ಕೊಡಬಹುದಲ್ಲವೇ?"

"ಬಹಳ ಒಳ್ಳೆಯ ಯೋಚನೆಯೇ ನಿನ್ನದು. ನಮ್ಮಜ್ಜನೂ ಕೂಡ ಹಾಗೆಯೇ ಎಣಿಸಿಕೊಂಡರು. ಅಣ್ಣನಿಗೆ ಈ ಹೊತ್ತಿಗಾದರೂ ಮನೆಯ ಖರ್ಚಿಗೆ ಸ್ವಲ್ಪ ಅನುಕೂಲ ಒದಗಿಸಿ ಕೊಡಬಹುದಲ್ಲಾ ಎಂಬ ಸಂತೋ ಷವೂ ಅವರಲ್ಲುಂಟಾಯಿತು. ಒಂದನೇ ತರಗತಿಯ ಪ್ರಯಾಣದ ಬತ್ತೆ ಊಟ ವಸತಿಗಳ ಖರ್ಚು ಇವೆಲ್ಲಾ ಅಲ್ಲದೆ ಅಷ್ಟು ವೇತನ ದೊರೆಯುವ ಹಾಗಾಯಿತು. ಅಂದರೆ ಅದು ದೇವರ ಆಟವೆಂದೇ ಅವರುನಂಬಿಕೊಂಡರು. ತಮ್ಮ ಹೊಸ ಉದ್ಯೋಗಕ್ಕೆ ಹೊರಡುವುದೆಂದು ನಿಶ್ಚೈಸಿದರು."

"ಹೆಂಡತಿ ಮಕ್ಕಳನ್ನು ಬಿಟ್ಟು ಅಷ್ಟು ದೂರ ಹೋಗಲು ವ್ಯಥೆಯಾಗಿರ ಬಹುದು. ಹೆಂಡತಿ ಮಕ್ಕಳನ್ನಾದರೂ ಕರಕೊಂಡು ಹೋಗಬಹುದು.

ಅಣ್ಣ ಬರುತ್ತಾರೇನು! ಅಣ್ಣಾ! ಕಸ್ತೂರಿಬಾ – ನಮ್ಮಜ್ಜಿಯನ್ನು ಕರಕೊಂಡು ಹೋದರೇ?"

"ಇಲ್ಲ. ಗುರುತಿಲ್ಲದ ಆ ಊರಿಗೆ ಒಮ್ಮೆಯೇ ಅವರನ್ನೆಲ್ಲಾ ಕರ ಕೊಂಡು ಹೋಗುವುದಕ್ಕಾಗುತ್ತದೆಯೇ? ಗಂಡಸರಿಗಾದರೆ ಹೇಗಾದರೂ ಇರಬಹುದು. 'ಮದುವೆ ಮಾಡಿಕೊಂಡವನೇ ಬಲ್ಲ, ಮನೆ ಕಟ್ಟಿಸಿದವನೇ ಬಲ್ಲ' ಎಂದು ಮಾತುಂಟಲ್ಲವೇ? ಅದರ ವಿಚಾರವೆಲ್ಲಾ ನಿನ್ನಂಥಾ ಎಳೆಯ ರಿಗೆ ಹೇಗೆ ಗೊತ್ತಾದೀತು? ಸಂಸಾರದ ಹೊರೆ ಹೊತ್ತವನೇ ಅದನ್ನು ಬಲ್ಲ; ಗಾಂಧೀಜಿಗೆ ಈ ಹೊತ್ತಿಗೆ ಎರಡನೆಯ ಮಗನು ಹುಟ್ಟಿದ್ದನು. ಗಾಂಧೀ ಜಿಗೆ ಈ ಬಾರಿ ಮನೆ ಬಿಟ್ಟು ಹೋಗುವಾಗ ಮೊದಲಿನಷ್ಟು ದುಃಖವಾಗ ಲಿಲ್ಲ."

"ಅದೇಕಣ್ಣಾ! ಹೇಗಾದರೂ ಒಂದು ಕೆಲಸ ಸಿಕ್ಕಿತೆಂಬ ಸಂತೋಷ ದಿಂದಲೇನು?"

"ತಾಯಿ ಮೊದಲೇ ತೀರಿಹೋಗಿದ್ದರು. ಆಗಾಗ ಬೊಂಬೈಗೂ ರಾಜ ಕೋಟೆಗೂ ಈ ಮೊದಲೇ ಮನೆ ಬಿಟ್ಟು ಪ್ರಯಾಣ ಅತ್ತಿತ್ತ ಸಾಗುತ್ತಿದ್ದುದ ರಿಂದ ಅಷ್ಟು ಚಿಂತೆಗೆಡೆಗೊಡಲಿಲ್ಲ. ನಮ್ಮಜ್ಜಿಯನ್ನು ಬಿಟ್ಟು ಹೋಗು ವುದು ಮಾತ್ರ ನಮ್ಮಜ್ಜನಿಗೆ ಸ್ವಲ್ಪ ಕಷ್ಟವಾಯಿತು. ಅವರು ಓದುವುದಕ್ಕೂ ಬರೆಯುವುದಕ್ಕೂ ಆಗ ಶಿಕ್ಷಣ ಕೊಟ್ಟಿದ್ದರು. ಈ ಹೊತ್ತಿಗೆ ಕಸ್ತೂರಿಬಾ ಸ್ವಲ್ಪ ತಿಳುವಳಿಕೆಯುಳ್ಳವರಾಗಿದ್ದುದರಿಂದ ಒಂದು ವರ್ಷದಲ್ಲೇ ಕೆಲಸ ವೆಲ್ಲಾ ತೀರಿಸಿ ಹಿಂತಿರುಗುವುದಾಗಿ ಸಮಾಧಾನ ಹೇಳಿದರು."

"ಅದಕ್ಕೆ ಕಸ್ತೂರಿಬಾ ಹೇಗೆ ಒಪ್ಪಿದರಣ್ಣಾ?"

"ಅಂದರೆ?"

"ಶ್ರೀರಾಮ ಕಾಡಿಗೆ ಹೋಗುವಾಗ ಎಷ್ಟು ಕಷ್ಟವಾದರೂ ನಿಮ್ಮೊಂದಿ ಗಿರುವುದೇ ನನಗೆ ಸುಖ, ಕಲ್ಲುಮುಳ್ಳಿನ ದಾರಿಯಲ್ಲಿ ನಡೆಯಬಲ್ಲೆ, ಬಂದ ಕಷ್ಟಗಳನ್ನೆಲ್ಲಾ ಸಹಿಸಬಲ್ಲೆ ಎಂದು ಸೀತಾದೇವಿ ಹಟ ಹಿಡಿದಿದ್ದಳಲ್ಲವೇ? ಹಾಗೆಯೇ ನಾನೂ ಬರುತ್ತೇನೆ. ನನ್ನನ್ನು ಕರೆದುಕೊಂಡೇ ಹೋಗಬೇಕು ಎಂದು ಹಟ ಹಿಡಿದು ಅಳಲಿಲ್ಲವೇ?"

"ಶ್ರೀರಾಮನು ತಂದೆಯ ವಚನವನ್ನು ನೆರವೇರಿಸುವುದಕ್ಕಾಗಿ ಎಲ್ಲರಿಗೂ ದುಃಖವನ್ನಿತ್ತು ಕಾಡಿಗೆ ತೆರಳಿದನು; ಗಾಂಧೀಜಿಯಾದರೆ ಯೋಗ್ಯತೆಯನ್ನು ಸಂಪಾದಿಸಲು ಸಂತೋಷದಿಂದ ಹೊರಟರು. ಹಾಗೇನೂ ಹಟವನ್ನು ನಮ್ಮಜ್ಜಿ ಮಾಡಲಿಲ್ಲ. ಪತಿಯನ್ನಗಲಿರಬೇಕೆಂದು ದುಃಖವಾಯಿತು. ಗಾಂಧೀಜಿ ಅವರಿಗೆ ತಕ್ಕ ಸಮಾಧಾನವಿತ್ತು ಹೊರಟರು.

* * * * *

"ತಮ್ಮಾ! ಗಾಂಧೀಜಿ ಹಡಗು ಹತ್ತಿ ಸಾಗಿ ಕೆಲವು ದಿನಗಳಲ್ಲಿ ನೇಟಾಲವನ್ನು ಸೇರಿದರು. ಆಬ್ದುಲ್ಲಾ ಸೇಟ್ ಗಾಂಧೀಜಿಯನ್ನು ಸ್ವಾಗತಿಸಿ ಅಲ್ಲಿನ ಮಿತ್ರರ ಪರಿಚಯವನ್ನೆಲ್ಲಾ ಗಾಂಧೀಜಿಗೆ ಮಾಡಿಕೊಟ್ಟರು. ತಲಪಿದ ಎರಡು ಮೂರು ದಿನಗಳಲ್ಲೇ ಕೋರ್ಟನ್ನು ತೋರಿಸಲಾಗಿ ನಮ್ಮಜ್ಜನನ್ನು ಕರಕೊಂಡು ಹೋದರು. ಅಲ್ಲಿನ ವಕೀಲರೊಂದಿಗೆ ಇವರನ್ನು ಕುಳಿತುಕೊಳ್ಳಿಸಿದರು. ಮೆಜಿಸ್ಟ್ರೇಟರಿಗೆ ಗಾಂಧೀಜಿಯ ರುಮಾಲಿನ ಮೇಲೆ ಕಣ್ಣು ಬಿತ್ತು. ಅವರು—

'ತಮ್ಮ ಮುಂಡಾಸನ್ನು ತೆಗೆಯಿರಿ' ಎಂದು ಹೇಳಿದರು."

"ತೆಗೆಯಲಾರೆ–ಎಂದು ಗಾಂಧೀಜಿ ನುಡಿದು ಅಲ್ಲಿಂದ ಹೊರಬಂದರು. ನಮ್ಮಜ್ಜನಿಗೆ ಈ ವರ್ತನೆ ಸಹಿಸಲಾರದಾಯಿತು. ರುಮಾಲನ್ನು ಸುತ್ತಿಕೊಳ್ಳುವುದಕ್ಕೂ ಸ್ವಾತಂತ್ರ್ಯವಿಲ್ಲದೆ ಹೋದರೆ ಹೇಗೆ? ಅಷ್ಟು ಪರಾಧೀನರಾಗಿ ದಾಸತ್ವವನ್ನೊಪ್ಪಿಕೊಳ್ಳಲು ಅವರು ಸಿದ್ಧರಿರಲಿಲ್ಲ."

"ಅಣ್ಣಾ! ಗಾಂಧಿ ಅಜ್ಜನಿಗೆಷ್ಟು ಧೈರ್ಯವೋ?"

"ತಮ್ಮಾ! ಸತ್ಯಕ್ಕೆ ಹೆದರಬೇಕೇ ಹೊರತು ಅನ್ಯಾಯಕ್ಕೆ ಹೆದರಬೇಕೇನು?"

"ಆದರೆ ಗಾಂಧಿ ಅಜ್ಜ ಮುಂದೂ ಕೂಡ ಕೋರ್ಟಿಗೆ ಹೋಗುವಾಗ ಮುಂಡಾಸು ತೆಗೆಯಲಿಲ್ಲವೇ?"

"ಇಲ್ಲ. ಭಾರತೀಯರು ಮುಂಡಾಸು ಧರಿಸಿ ಕೋರ್ಟಿಗೆ ಹೋಗಬಾರದೆಂಬ ಸುಗ್ರೀವಾಜ್ಞೆಗೆ ಅವರು ಹೆದರಲಿಲ್ಲ. ರುಮಾಲನ್ನು ಸುತ್ತಿ

ಕೊಳ್ಳುವಷ್ಟು ಸ್ವಾತಂತ್ರ್ಯ ವ್ಯಕ್ತಿಗಿಲ್ಲದೆ ಹೋದರೆ ಆತನು ಮನುಷ್ಯನಾಗಿ ಜೀವಿಸುವುದೇಕೆ?—ಎಂದವರಿಗನ್ನಿಸಿತು."

"ಅಣ್ಣಾ! ಗಾಂಧಿ ಅಜ್ಜನಲ್ಲಿ ಹೊಸ ಶಕ್ತಿ ಬಂದಂತಾಯಿತು."

"ಹೌದು. ಈ ವಿಷಯದಲ್ಲಿ ಗಾಂಧೀಜಿ ಬರಕೊಂಡರು. ಪತ್ರಿಕೆಗಳಲ್ಲಿ ಈ ಬಗ್ಗೆ ಲೇಖನಗಳನು ಪ್ರಕಟಿಸಿ ಈ ರೀತಿ ಭಾರತೀಯರನ್ನು ನೋಡುವುದು ಅನ್ಯಾಯವೆಂದೂ ಇಂಥಾ ಮನೋಭಾವನೆಯನ್ನು ದೂರೀಕರಿಸಬೇಕೆಂದೂ ಪ್ರಕಟಿಸತೊಡಗಿದರು. ಹೋದ ನಾಲ್ಕೈದು ದಿನಗಳಲ್ಲೇ ಈ ಘಟನೆಯಿಂದಲಾಗಿ ಗಾಂಧಿ ಅಜ್ಜನ ಕೀರ್ತಿ ದಕ್ಷಿಣ ಆಫ್ರಿಕದಲ್ಲಿ ಹಬ್ಬಿಬಿಟ್ಟಿತು."

"ಅಣ್ಣಾ! ಜನರೆಲ್ಲಾ ಈ ಬಗ್ಗೆ ಅವರನ್ನು ಮೆಚ್ಚಿದರೇ?"

"ಕೆಲವರು ಮೆಚ್ಚಿ ಗಾಂಧೀಜಿಯ ವಿಚಾರವನ್ನು ಸಮರ್ಥನೆ ಮಾಡಿದರು. ಮತ್ತೆ ಕೆಲವರು ನಿಂದಿಸಿದರು. ಗಾಂಧೀಜಿಯ ಜೀವನದಲ್ಲಿ ಹೊಸ ಬೆಳಕು ಕಂಡಿತು. ಇದೇ ಭಾರತದ ಸ್ವಾತಂತ್ರ್ಯದ ಹೋರಾಟಕ್ಕೆ ಹೊಡೆದ ಮೊತ್ತಮೊದಲಿನ ರಣಭೇರಿ ಎಂದೂ ಹೇಳಬಹುದು. ಗಾಂಧೀಜಿ ಮೆಜಿಸ್ಟ್ರೇಟರ ಈ ಅಪ್ಪಣೆಯನ್ನುಲ್ಲಂಘಿಸಿ ನ್ಯಾಯವರ್ತನೆಯಿಂದ ತಮ್ಮ ಒಂದು ವಿಧವಾದ ಸ್ವಾತಂತ್ರ್ಯವನ್ನು ಕಾಪಾಡಿಕೊಂಡರು."

"ಅಣ್ಣಾ! ಮುಂಡಾಸು ಕಟ್ಟುವ ಈ ಒಂದು ಸಣ್ಣ ವಿಚಾರದಲ್ಲೂ ಭಾರತೀಯರ ಮೇಲೆ ಅವರಿಗೆ ಕಣ್ಣು ಏಕೆ?"

"ಬಿಳಿಯರು ಕಪ್ಪು ಬಣ್ಣದ ಹಿಂದೂದೇಶದವರನ್ನು ಅನಾಗರಿಕರೆಂದು ತಿಳಕೊಂಡು ಬಹುತಾತ್ಸಾರ ದೃಷ್ಟಿಯಿಂದ ನೋಡುತ್ತಿದ್ದರು. ಅವರೊಂದಿಗೆ ಕುಳಿತುಕೊಳ್ಳುವುದಕ್ಕೂ ಭಾರತೀಯರು ಅಯೋಗ್ಯರೆಂಬ ಅಂಥ ವಿಚಾರ ಅವರಲ್ಲಿದ್ದಿತು."

"ಅಣ್ಣಾ! ಆದರೆ ಅಲ್ಲಿ ಗಾಂಧೀಜಿಗೆ ಜೀವನ ನಡೆಸಲು ಬಹುಕಷ್ಟವಾಗಿರಬಹುದಲ್ಲವೇ?"

"ಅವರು ಕಷ್ಟವೆಂದೆಣಿಸಿಕೊಳ್ಳಲಿಲ್ಲ. ಅಲ್ಲಿರುವ ಭಾರತೀಯರಿಗೆ ಯೋಗ್ಯ ಗೌರವ ದೊರೆಯುವಂತೆ ಮಾಡಲು ದುಡಿಯುವುದು ತನ್ನ

ಕರ್ತವ್ಯವೆಂದು ತಿಳಿದು ಅದಕ್ಕಾಗಿ ತುಂಬಾ ಶ್ರಮ ವಹಿಸಿದರು. ಅಲ್ಲಿ ಒಂದನೇ ದರ್ಜೆಯಲ್ಲಿ ಕುಳಿತು ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಾಗ ಭಾರತೀಯನೆಂಬ ಹೀನದೃಷ್ಟಿಯಿಂದ ಅವರನ್ನು ಹೊರಗೆಳೆದು ಹಾಕಿದರು."

"ಟಿಕೇಟಿದ್ದರೆ ಹೊರಗೆಳೆಯುವುದು ಹೇಗಣ್ಣಾ! ಗಾಂಧೀಜಿ ಟಿಕೇಟು ತೋರಿಸಲಿಲ್ಲವೇ?"

"ತಮ್ಮಾ! ಅದಕ್ಕೆ ಹುಚ್ಚು ವರ್ತನೆ, ಅನಾಗರಿಕತೆಯೆಂದು ಹೇಳುವುದು. ತಲೆಗೇರಿದ ಪಿತ್ತವೇ ಅದಕ್ಕೆ ಕಾರಣ. ಒಂದನೇ ತರಗತಿಯ ಟಿಕೇಟು ಪಡೆದು ಗಾಂಧಿ ಅಜ್ಜ ಟ್ರೈನಿನಲ್ಲಿ ಆಸೀನರಾಗಿದ್ದರು. ಅಷ್ಟರಲ್ಲೇ ಬಿಳಿಯನೊಬ್ಬನು ಅದರಲ್ಲಿ ಕುಳಿತುಕೊಳ್ಳಲಾಗಿ ಬಂದನು. ಭಾರತೀಯನೊಡನೆ ಕುಳಿತುಕೊಳ್ಳುವುದೂ ಭಾರತೀಯನು ಒಂದನೇ ತರಗತಿಯಲ್ಲಿ ಕುಳಿತುಕೊಳ್ಳುವುದೂ ಅಸಹ್ಯವಾಗಿ ಕಂಡು 'ಕೆಳಗಿಳಿ' ಎಂದರಂತೆ."

"ಗಾಂಧೀಜಿ ಏನು ಹೇಳಿದರಣ್ಣಾ?"

"ನನ್ನ ಕೈಯಲ್ಲಿ ಟಿಕೇಟಿದೆ ಎಂದರು. ಬಿಳಿಯನು—ಟಿಕೇಟಿದ್ದರೆ ಚಿಂತಿಲ್ಲ, ಮೂರನೆ ತರಗತಿ ನಿನಗೆ ಯೋಗ್ಯವಾದುದೆಂದು ಹೇಳಿದನು. ಗಾಂಧೀಜಿ ಅವನನ್ನು ಲಕ್ಷಿಸಲಿಲ್ಲ.—ನೀನು ಏನು ಬೇಕೋ ಅದನ್ನು ಮಾಡು. ಹಣ ಕೊಟ್ಟು ನಿನ್ನಂತೆಯೇ ಪ್ರಯಾಣಕ್ಕೆ ಹೊರಟವ ನಾನೆಂದು ಅಲ್ಲಿಂದ ಕದಲಲಿಲ್ಲ. ಕೂಡಲೇ ಆತನು ರೈಲಿನ ಗಾರ್ಡುಗಳನ್ನು ಕರೆಸಿ ಗಾಂಧೀಜಿಯನ್ನು ಎಳೆದು ಹೊರಗೆ ಹಾಕಿಸಿದನು. ಅವರ ಸಾಮಾನುಗಳೂ ಹೊರಗೆ ಬಿದ್ದವು."

"ಪಾಪ! ಎಂಥಾ ಅಪಮಾನ! ಎಂಥಾ ಅನ್ಯಾಯ!"

"ಅಲ್ಲಿ ಭಾರತೀಯರನ್ನು ಬಹಳ ವಿಚಿತ್ರ ರೀತಿಯಿಂದ ನೋಡುತ್ತಿದ್ದರು. ಭಾರತೀಯರೆಂದರೆ ಗುಲಾಮರೆಂಬ ತಾತ್ಸಾರ ಅವರದು. ಅಲ್ಲಿನ ಬಿಳಿ ಜನರು ಉಣ್ಣುವಲ್ಲಿ ಭಾರತೀಯರನ್ನುಣ್ಣ ಬಿಡುತ್ತಿರಲಿಲ್ಲ. ಮಲಗಲು ಕೋಣೆಗಳೂ ಸಿಗುತ್ತಿದ್ದಿಲ್ಲ. ಒಳ್ಳೆಯ ಹೋಟೇಲುಗಳಲ್ಲಿ ಭಾರತೀಯರಿಗಂತೂ ಪ್ರವೇಶವೇ ದೊರೆಯುತ್ತಿರಲಿಲ್ಲ. ಭಾರತೀಯರೂ ಮನುಷ್ಯರೆಂಬ ವಿಚಾರ ಅಲ್ಲಿನ ಮಂದಿಗಿರಲಿಲ್ಲ."

"ಆದರೆ ಅಲ್ಲಿಗೆ ಇಲ್ಲಿಂದ ಹೋದವರೆಲ್ಲಾ ಹೇಗೆ ಜೀವನ ಮಾಡುತ್ತಿದ್ದರಣ್ಣಾ!"

"ಅಲ್ಲಿಗೆ ಹೋದವರು ವ್ಯಾಪಾರಕ್ಕಾಗಿ ಹೋದವರಾದ್ದರಿಂದ ಅವರಿಗೆ ದೊರೆಯುವ ಗೌರವದ ವಿಚಾರ ಲಕ್ಷ್ಯಕ್ಕೆ ತರುತ್ತಿರಲಿಲ್ಲ. ವ್ಯಾಪಾರಿಗಳಿಗೆ ಹಣದ ಗೊಡವೆ ಹೊರತು ಮರ್ಯಾದೆಯ ಆಸೆಯಿರಲಿಲ್ಲ. ಅವರೆಲ್ಲರೂ ಈ ಕಷ್ಟಗಳನ್ನೆಲ್ಲಾ ಸಹಿಸಿಕೊಳ್ಳುತ್ತಿದ್ದರು. ಗಾಂಧೀಜಿಯನ್ನು ಇದೇ ರೀತಿ ಕಾಲುದಾರಿಯಲ್ಲಿ ನಡೆವಾಗಲೂ ಅವಮಾನಗೊಳಿಸಿದರು. ಜಟ್ಕಾದಲ್ಲಿ ಪ್ರಯಾಣ ಮಾಡುತ್ತಿದ್ದಾಗಲೂ ಒಮ್ಮೆ ಅವರು ಇಂಥಾ ಕಷ್ಟ ಅನುಭವಿಸಬೇಕಾಯಿತು."

"ಅಣ್ಣಾ! ಗಾಂಧೀಜಿ ಆದರೆ ಅಲ್ಲಿ ಬಹಳ ಕೆಲಸ ಮಾಡಿದರೇ?"

"ಹೌದು. ಭಾರತೀಯರಿಗೆ ಅಲ್ಲಿ ಒದಗುತ್ತಿರುವ ಸಂಕಟಗಳನ್ನೆಲ್ಲಾ ದೂರೀಕರಿಸುವುದು ತನ್ನ ಕಾರ್ಯವೆಂದು ಶಾಂತರೀತಿಯಿಂದಲೇ ಅದನ್ನು ಇದಿರಿಸುವುದಕ್ಕೆ ಯತ್ನಿಸಿದರು. ಭಾರತೀಯರು ಅವಿದ್ಯಾವಂತರಾಗಿ ಕಷ್ಟ ಪಡುತ್ತಿದ್ದಾರೆಂದು ಗಾಂಧೀಜಿಗನ್ನಿಸಿತು. ಈ ಕಾರಣದಿಂದಲಾಗಿ ಅಲ್ಲಿರುವ ಮಂದಿ ಒಗ್ಗಟ್ಟಿನಿಂದಿಲ್ಲವೆಂದೂ ಒಗ್ಗಟ್ಟಾದರೆ ಇರುವ ಕಷ್ಟವನ್ನೆಲ್ಲಾ ಹೋಗಲಾಡಿಸಬಹುದೆಂದೂ ಅನ್ನಿಸಿತು."

"ಅಣ್ಣಾ! ಗಾಂಧೀಜಿ ಚಳವಳ ಹೂಡಿದರೇ? ಗಾಂಧೀಜಿಯ ಶಕ್ತಿ ಪ್ರಭಾವಗಳೆಲ್ಲಾ ಹೊರ ಬರತೊಡಗಿದುವಲ್ಲವೇ?"

"ತಮ್ಮಾ! ದಕ್ಷಿಣ ಆಫ್ರಿಕದಲ್ಲಿ ಗಾಂಧೀಜಿಯ ಕೀರ್ತಿ ಹೇಗೆ ಹಬ್ಬಿತು? ಏನೆಲ್ಲಾ ಮಾಡಿದರು? ಎಂಬುದನ್ನು ಕೇಳಿದರೆ ನಿನಗೆ ಬಹಳ ಸೋಜಿಗವೆನಿಸೀತು. ಗಾಂಧೀಜಿಗೆ ಮಾತನಾಡಲಾಗುತ್ತಿರಲಿಲ್ಲ. ವಕಾಲತು ಮಾಡುವುದು ಅಸಾಧ್ಯವಾಗಿತ್ತು ಎಂದೆಲ್ಲಾ ಹೇಳಿದ್ದೆನಲ್ಲವೇ? ದಕ್ಷಿಣ ಆಫ್ರಿಕಕ್ಕೆ ತೆರಳಿದಾಗ ಹಾಗೇನೂ ಆಗಲಿಲ್ಲ. ದೊಡ್ಡ ಮೊಕದ್ದಮೆಯ ವಿಚಾರಕ್ಕೇ ಅನೇಕ ವಕೀಲರೊಂದಿಗೆ ಕೈಹಾಕಿದ್ದರಿಂದ ವಕಾಲತು ಮಾಡುವುದು ಅಸಾಧ್ಯವೆಂದು ತಿಳಿದ ಗಾಂಧಿ ಅಜ್ಜ ಅದರಲ್ಲಿ ಅನುಭವಗೊಂಡು ವಕಾಲತು ನಡೆಸಿ ಆಟದಂತೆ ಗೆಲ್ಲಬಲ್ಲೆ ಎಂದರಿತುಕೊಂಡರು."

"ಅಣ್ಣಾ! ಭಲೇ ಎನ್ನಿಸಿಕೊಂಡರಲ್ಲಾ ನಮ್ಮಜ್ಜ ಆ ನಂಬ್ರದಲ್ಲಿ ಗುಣವಾಯಿತೇನು?"

"ಗುಣವಾಗದೆ ಇರುತ್ತದೆಯೇ? ಗಾಂಧೀಜಿಗೆ ವಕೀಲ ವೃತ್ತಿಯಲ್ಲಿ ಒಂದು ತರದ ಜುಗುಪ್ಸೆಯೂ ಹುಟ್ಟಿತು."

"ಅದೇಕಣ್ಣಾ?"

"ವಕಾಲತು ನಡೆಸಿ ಎರಡು ಕಡೆಯಿಂದಲೂ ಕಿಸೆ ತುಂಬಿಸಿಕೊಳ್ಳುವ ವಕೀಲವೃತ್ತಿ ಯೋಗ್ಯವಲ್ಲವೆಂದು ಕಂಡಿತು."

"ಆದರೆ ವಕಾಲತು ಬಿಟ್ಟರೇ?"

"ಅನ್ಯರು ಆ ರೀತಿ ವರ್ತಿಸುವರೆಂದು ಗಾಂಧೀಜಿ ಬಿಡುವುದರಲ್ಲಿ ಅರ್ಥವಾದರೂ ಏನು? ಕೋರ್ಟಿಗೆ ಹೋಗಿ ವಾದಿಸಿ ಒಬ್ಬರು ಸೋತು ಕಂಗಾಲಾಗುವ ವಿಷಮ ಪರಿಸ್ಥಿತಿಯನ್ನೆಲ್ಲಾ ನೆನೆದು ಗಾಂಧೀಜಿ ಇಬ್ಬರಿಗೂ ಕೇಡಾಗದಂತೆ ರಾಜಿ ಮಾಡಿಸುವುದು ವಕೀಲನ ಧರ್ಮವೆಂದು ತಿಳಕೊಂಡರು."

"ಅಣ್ಣಾ! ಅನ್ಯರ ಹಿತವೇ ನಮ್ಮಜ್ಜನ ಹಿತವಲ್ಲವೇ? ನಮ್ಮಜ್ಜನಿಗೆ ಹಣ ಬೇಡ; ಜನರ ಸುಖಬೇಕು, ಸಂತೋಷಬೇಕು, ಪ್ರೀತಿ ಬೇಕು ಅಲ್ಲವೇ?"

"ತಮ್ಮಾ! ವಿಶ್ವಪ್ರೇಮಿ ಅಲ್ಲವೇ ನಮ್ಮಜ್ಜ! ಅಲ್ಲಿನ ಜನರು ಒಗ್ಗಟ್ಟಿಲ್ಲದೆ ಕಷ್ಟಪಡುತ್ತಿರುವುದರಿಂದ ಅವರ ಐಕ್ಯಕ್ಕಾಗಿ ಒಂದು ಸಭೆ ಸೇರಿಸಿದ್ದರು. ಆಗ ಶಿಕ್ಷಣವಿಲ್ಲದೆ ಇರುವ ಮಂದಿಯೇ ಅಧಿಕವೆಂದು ಸ್ವತಃ ಶಿಕ್ಷಣಗೊಟ್ಟು ಉದ್ಧರಿಸುವುದಕ್ಕೂ ಮುಂದಾದರು."

"ಅಣ್ಣಾ! ಎಲ್ಲರ ಒಳಿತಿಗಾಗಿ ದುಡಿಯುವುದು ಬಹು ಕಷ್ಟವೇ ಸರಿ. ಎಲ್ಲರನ್ನೂ ಅಣ್ಣ ತಮ್ಮಂದಿರೆಂದೂ ಅಕ್ಕತಂಗಿಯರೆಂದೂ ಭಾವಿಸಬೇಕಾದರೆ ನಮ್ಮಜ್ಜನ ಹೃದಯವೆಷ್ಟು ವಿಶಾಲವೋ!"

"ನಮ್ಮಜ್ಜನ ಹೃದಯ ಆಕಾಶದಷ್ಟೂ ವಿಶಾಲವಾದುದು. ಆ ಜಾತಿ ಈ ಜಾತಿಯೆಂದು ತಿಳಕೊಂಡು ಭೇದ ಕಟ್ಟಿಕೊಳ್ಳುವುದನ್ನು ಬಿಟ್ಟು ಎಲ್ಲರೂ ಅಣ್ಣ ತಮ್ಮಂದಿರಂತಿರಬೇಕೆಂದು ಅಲ್ಲಿ ಉಪದೇಶಿಸಿದರು. ಅಲ್ಲಿ ಒದಗು

ತ್ತಿರುವ ಕಷ್ಟಗಳನ್ನೆಲ್ಲಾ ಎಲ್ಲರೂ ಒಂದಾಗಿ ಬರೆದು ತಿಳಿಸಿ ಪರಿಹರಿಸಿಕೊಳ್ಳು ವುದಕ್ಕೆ ಯತ್ನಿಸಿದರು. ಗಾಂಧೀಜಿಯ ವಿಶಾಲದೃಷ್ಟಿ, ಕರ್ತೃತ್ವಶಕ್ತಿ ಇವು ಗಳನ್ನೆಲ್ಲಾ ಕಂಡು ಎಲ್ಲರಿಗೂ ಆಶ್ಚರ್ಯವಾಯಿತು. ಎಳೆಯ ಪ್ರಾಯದ ಗಾಂಧೀಜಿಯನ್ನು ಅಲ್ಲಿನ ಮಂದಿಯೆಲ್ಲಾ ಆದರದಿಂದ ಕಂಡರು; ಅವರ ನಾಯಕನನ್ನಾಗಿ ತಿಳಕೊಂಡರು."

"ಅಣ್ಣಾ! ಎಳವೆಯಲ್ಲಿದ್ದ ದೌರ್ಬಲ್ಯವನ್ನೆಲ್ಲಾ ನೀಗಿ ಎಷ್ಟು ಬೇಗನೆ ನಾಯಕರಾಗಿ ಬಿಟ್ಟರು!"

"ತಮ್ಮಾ! ನೀನೂ ಕೂಡ ಹಾಗಾಗಬೇಕು. ನಿನ್ನಲ್ಲಿರುವ ಕೆಡುಕ ನ್ನೆಲ್ಲಾ ನೀನರಿತು ಅದನ್ನು ಹೋಗಲಾಡಿಸಿಕೊಳ್ಳಬೇಕು. ಮೊಕದ್ದಮೆ ತೀರಿದ ಬಳಿಕ ಗಾಂಧೀಜಿ ಭಾರತಕ್ಕೆ ಮರಳುವ ಯೋಚನೆ ಮಾಡಿದರು. ಅಷ್ಟರಲ್ಲೇ ಭಾರತೀಯರಿಗಲ್ಲಿರುವ ಓಟಿನ ಹಕ್ಕನ್ನು ರದ್ದುಗೊಳಿಸುವರೆಂಬ ವಾರ್ತೆ ತಿಳಿಯಿತು. ಗಾಂಧೀಜಿಗೆ ಅದು ಸರಿ ಕಾಣಲಿಲ್ಲ. ಅಬ್ದುಲ್ಲಾ ಸೇಟುಗಳೊಡನೆ ಈ ವಿಷಯದಲ್ಲಿ ಪ್ರಸ್ತಾಪ ಮಾಡಿದರು."

"ಅವರೇನಂದರಣ್ಣಾ!"

"ಅವರೆನ್ನುವುದೇನು? ವ್ಯಾಪಾರಿಗಳಾದ ನಮಗೆ ಅದೊಂದು ಅರಿ ಯದು. ಓದಿ ಕಲಿತವರು ನಾವಲ್ಲ. ನಮ್ಮಿಂದೇನಾಗುವುದು? ನಮ್ಮ ಕಣ್ಣು ಕೈಕಾಲು ಎಲ್ಲವೂ ವಕೀಲರನ್ನೇ ಹೊಂದಿ ಕೆಲಸ ಮಾಡುತ್ತಿದೆ. ಎಂದರು. ಗಾಂಧೀಜಿ ಊರಿಗೆ ಬರಬೇಕಾಗಿತ್ತು. 'ಈ ಕಾನೂನು ಪಾಸಾ ದರೆ ತುಂಬಾ ಕಷ್ಟವಾದೀತು. ಭಾರತೀಯರ ಎಲ್ಲಾ ಹಕ್ಕನ್ನು ಮುರಿ ಯುವ ಮೊದಲ ಹೆಜ್ಜೆಯಿದು. ಅಸ್ತಿತ್ವಕ್ಕೂ ಕೇಡು ಬರಬಹುದು' ಎಂದು ತಿಳಿಸಿದರು."

"ಅಂತೂ ವಿಚಾರಿಸತಕ್ಕ ವಿಷಯವೇ ಆಯಿತು. ಹೀಗಿರಲು ಅವ ರನ್ನು ಅಲ್ಲಿಂದ ಹಿಂತಿರುಗಲು ಬಿಟ್ಟರೇನು?"

"ಇಲ್ಲ. ಈ ವಿಚಾರದಲ್ಲಿ ಕೆಲವರೊಡನೆ ಮಾತುಕತೆಯಾಯಿತು. ಗಾಂಧೀಜಿಯನ್ನು ಇಲ್ಲಿಂದ ಹೋಗಬಿಡಬಾರದು ಎಂದು ಕೆಲವರು ಸೇಟು ಗಳೊಡನೆಂದರು. ಹೇಗೆ ತಡೆಯಲಿ! ಗಾಂಧೀಜಿ ಬ್ಯಾರಿಸ್ಟರಲ್ಲವೇ? ಅವರಿಗೆ

ಫೀಸು ಕೊಡಬೇಡವೇ? ಎಂದು ಪ್ರಶ್ನೆ ಅವರು ಮಾಡಿದರು. ಗಾಂಧೀಜಿಗೆ ಹಣದ ಪ್ರಶ್ನೆಯಿಂದಲಾಗಿ ವ್ಯಸನವಾಯಿತು. ತಾನು ನಿಮ್ಮ ಸೇವೆ ಮಾಡ ಬಲ್ಲೆ. ಸಾರ್ವಜನಿಕ ಕಾರ್ಯಕ್ಕಾಗಿ ಹಣದ ಪ್ರಶ್ನೆಯೇ? ಈ ಕೆಲಸಕ್ಕೆ ಹಣದ ಖರ್ಚು ಇದೆ. ತಂತಿ ಕಳುಹಬೇಕಾದೀತು. ಪ್ರಯಾಣ ಮಾಡ ಬೇಕಾದೀತು; ಕಾನೂನು ಪುಸ್ತಕಗಳು ಬೇಕಾಗಬಹುದು. ಈ ಎಲ್ಲಾ ಖರ್ಚನ್ನು ನೀವೆಲ್ಲಾ ಒಂದಾಗಿ ನೋಡಿಕೊಂಡರೆ ಸಾಕಾಗಬಹುದು ಎಂದು ಹೇಳಿದರು. ಗಾಂಧೀಜಿಯ ನಿಃಸ್ವಾರ್ಥ ಬುದ್ಧಿಯನ್ನು ಕಂಡು ಎಲ್ಲರಿಗೂ ಮಹದಾನಂದವಾಯಿತು. ಧಾರಾ ಸಭೆಯಲ್ಲಿ ಮತಾಧಿಕಾರವನ್ನು ಕಿತ್ತೊ ಗೆಯುಲಿರುವ ಚರ್ಚೆ ನಡೆಯುತ್ತಿರುವಾಗಲೇ ಆ ವಿಚಾರದ ಬಗ್ಗೆ ಅಸಮ್ಮತಿ ಯನ್ನು ತಂತಿಯ ಮೂಲಕ ಕಳುಹಿದರು. ಎರಡು ದಿನಗಳ ಮಟ್ಟಿಗೆ ನಿಲ್ಲಿ ಸುವುದಾಗಿಯೂ ಉತ್ತರ ದೊರೆಯಿತು."

"ಅಣ್ಣಾ! ಹೀಗೆಲ್ಲಾ ಗಲಾಟೆ ಎಬ್ಬಿಸುವುದಕ್ಕೆ ಗಾಂಧೀಜಿಗೆ ಹೇಗೆ ಧೈರ್ಯ ಬಂತಪ್ಪಾ ಆ ಪರವೂರಿನಲ್ಲಿ!"

"ತಮ್ಮಾ! ಸತ್ಯಕ್ಕೆ ಮಾತ್ರ ಹೆದರಬೇಕೆಂದು ನಮ್ಮಜ್ಜ ಹೇಳುತ್ತಿರ ಲಿಲ್ಲವೇ? ಸತ್ಯಮಾರ್ಗದಲ್ಲಿ ನಡೆಯುವವನಿಗೆ ತನ್ನಿಂದ ತಾನೇ ಧೈರ್ಯ ವುಂಟಾಗುವುದು. ದೇವರು ಅಂಥಾ ವ್ಯಕ್ತಿಗೆ ಸಾಹಸ ಧೈರ್ಯ ಎಲ್ಲವನ್ನೂ ಕರುಣಿಸುವನು. 'ಸರ್ವತ್ರ ಭಯವರ್ಜನಾ' ಎಂದು ನಮ್ಮಜ್ಜ ದಿನನಿತ್ಯ ಹೇಳುತ್ತಿರಲಿಲ್ಲವೇ?"

"ಅಣ್ಣಾ! ಆದರೆ ಆ ಕಾನೂನು ಪಾಸಾಗಲಿಲ್ಲವೇ?"

"ಅನೇಕ ಮಂದಿಯ ಸಹಿಗೊಂಡ ಅರ್ಜಿಯನ್ನು ಕಳುಹಲಾಯಿತು. ಗಾಂಧೀಜಿ ದಕ್ಷಿಣ ಆಫ್ರಿಕದಲ್ಲಿದ್ದು ಮಾಡತಕ್ಕ ಕೆಲಸ ಅನೇಕವಿತ್ತು. ಅದ ಕ್ಕಾಗಿಯೇ ದೈವವು ಹೂಡಿದ ಉಪಾಯವೋ ಎಂಬಂತೆ ಯತ್ನ ನಿಷ್ಫಲವೇ ಆಯಿತು."

"ಅದರೆ ಅಜ್ಜನಿಗೆ ಎಷ್ಟು ದುಃಖವಾಯಿತೋ ಏನೋ?"

"ಇಂಥಾ ಸೋಲಿಗೆಲ್ಲಾ ಗಾಂಧಿ ಅಜ್ಜ ಹೆದರುತ್ತಾರೇನು?"

"ಸೋಲು ಬರಲು
ಅರಿವು ಇರಲು
ಸೋಲಿಗೇಕೆ ಮರುಗಲೋ ।
ಆಗು ಹೋಗು
ಅವನದೆನ್ನೆ
ಕರ್ಮಲೋಕವರಿಯೆಲೋ ॥ ॥ ೧ ॥

ಸೋಲು ಬರಲು
ನಮ್ಮ ಕಾರ್ಯ
ಹಿರಿಯದೆಂದು ತಿಳಿಯುವ ।
ಕಷ್ಟದಲ್ಲಿ
ಸುಖವ ಕಾಂಬ
ಪಂಥವನ್ನೆ ಹಿಡಿಯುವ ॥ ॥ ೨ ॥

ಎಂಬ ಕವಿತೆಯನ್ನು ನೀನು ಕೇಳಿಲ್ಲವೇ? ಸೋಲೇ ಗೆಲವಿನ ಹಾದಿಯಲ್ಲವೇ? ಗಾಂಧೀಜಿ ದಕ್ಷಿಣ ಆಫ್ರಿಕದಲ್ಲಿ ಸ್ಥಾಯಿಯಾಗಿರಬೇಕೆಂಬ ಪರಮಾತ್ಮನ ಇಚ್ಛೆ ವಿಫಲವಾಗುತ್ತದೇನು? ಇದರಿಂದಲಾಗಿ ಅಲ್ಲಿನ ಮಂದಿ ಎಚ್ಚೆತ್ತರು. ಸಮಾಜವೆಂದರೇನೆಂದವರಿಗರಿಯಿತು. ತೊಡಗಿದ ಕಾರ್ಯವನ್ನು ಅರ್ಧದಲ್ಲಿ ಕೈಬಿಡುವುದು ಉತ್ತಮರ ಲಕ್ಷಣವಲ್ಲವಷ್ಟೆ. ಈ ಬಗ್ಗೆ ಅಧಿಕಾರಿಗಳಿಗೆ ದೊಡ್ಡ ಅರ್ಜಿಯನ್ನು ಬರೆಯುವುದಾಗಿ ನಿಶ್ಚೈಸಿದರು. ಹತ್ತು ಸಾವಿರ ಮಂದಿಯ ಸಹಿಯುಳ್ಳ ಅರ್ಜಿ ತಯಾರಿಸಿ ಕಳುಹಲಾಯಿತು. ಬೇರೆ ಬೇರೆ ಪತ್ರಿಕೆಗೂ ಬರೆದುಕೊಂಡರು. ಅರ್ಜಿಯ ಸಾವಿರಾರು ಪ್ರತಿಗಳು ಅಚ್ಚಾಗಿ ಹೊರಬಿದ್ದವು. 'ಟೈಮ್ಸ್ ಓಫ್ ಇಂಡಿಯಾ' ಪತ್ರಿಕೆಯಲ್ಲಿ ಇದನ್ನು ಸಮರ್ಥಿಸಿ ಅಗ್ರಲೇಖನ ಪ್ರಕಟಿಸಿದರು. 'ಲಂಡನ್ ಟೈಮ್ಸ್' ಪತ್ರಿಕೆಯವರು ಇದನ್ನು ಪುಷ್ಟೀಕರಿಸಿದರು. ಇದರಿಂದ ಬಿಲ್ ಮಂಜೂರಾತಿ ರದ್ದುಗೊಳ್ಳುವುದೆಂಬ ಆಶೆ ಆಗಲೇ ಉಂಟಾಯಿತು. ಗಾಂಧೀಜಿಯ ಕೀರ್ತಿ ದುಂದುಭಿ ದಿಕ್ಕುದಿಕ್ಕುಗಳಲ್ಲಿ ಮೊಳಗುವಂತಾಯಿತು."

"ಅಣ್ಣಾ! ಗಾಂಧೀಜಿಗೆ ಖರ್ಚಿಗೆ ಕೊಟ್ಟು ತುಂಬಾ ಉಪಕಾರ ಪಡಕೊಂಡರಲ್ಲವೇ?"

"ಹೌದು. ಗಾಂಧೀಜಿಗೆ ಸಾರ್ವಜನಿಕ ಸೇವೆಯೊಂದಿಗೆ ವಕಾಲತ್ತನ್ನೂ ಮಾಡಬೇಕೆಂದು ಕಂಡಿತು. ಅವರ ಖರ್ಚಿನ ಬಗ್ಗೆ ಬೇಕಾದಷ್ಟು ಹಣ ಕೊಡುವುದಾಗಿ ಹೇಳಿದರೂ ಸಾರ್ವಜನಿಕರಿಗಾಗಿ ದುಡಿವ ತಾನು ತನ್ನ ಖರ್ಚಿಗೆ ಅವರಿಂದ ಪಡೆಕೊಳ್ಳುವುದು ಯೋಗ್ಯವಲ್ಲವೆಂದು ಗಾಂಧೀಜಿಗೆನ್ನಿಸಿತು. ಗಾಂಧೀಜಿಯು ಖರ್ಚು ದಿನೇದಿನೇ ಹೆಚ್ಚುತ್ತಿತ್ತು. ತಾನು ಸಂಪಾದಿಸಬೇಕು. ಅನ್ಯರಿಗಾಗಿ ಸೇವೆ ಸಲ್ಲಿಸಬೇಕೆಂಬ ಯೋಚನೆ ಅವರದಾಯಿತು."

"ಅಬ್ಬಾ! ಗಾಂಧೀಜಿಯು ಯೋಚನೆಯೇ? ಅಷ್ಟು ಅವರ ವಿಚಾರ ಪರಿಶುದ್ಧವಾಗಿರಬೇಕಾದರಣ್ಣಾ ಅವರ ಬುದ್ಧಿಯು ಸಂಸ್ಕಾರ ಹೇಗಿರಬಹುದೆಂದು ನನ್ನಿಂದ ಊಹಿಸಲಸಾಧ್ಯ."

"ವ್ಯಾಪಾರಿಗಳು ಅದಕ್ಕೊಪ್ಪಲಿಲ್ಲ. ಗಾಂಧೀಜಿಗೆ ಏನು ಬೇಕೋ ಅದನ್ನೆಲ್ಲಾ ತಾವೇ ಒದಗಿಸುವೆವು ಎಂದು ಸಂತೋಷದಿಂದಲೂ ಉತ್ಸಾಹದಿಂದಲೂ ಆದರದಿಂದ ಒತ್ತಾಯಪೂರ್ವಕವೇ ತಿಳಿಸಿದರು."

"ಅಣ್ಣಾ! ಆದರೆ ಗಾಂಧಿ ಅಜ್ಜ ಅವರ ಜೀವ ಎನ್ನುವ ಹಾಗಾದರಲ್ಲವೇ?"

"ಮತ್ತೆ! ಅನ್ಯರ ಒಳಿತಿಗಾಗಿ ದುಡಿವ ವ್ಯಕ್ತಿ ಹಾಗಾಗದೆ ಇದ್ದಾನೇ? ಗಾಂಧೀಜಿ ಹೀಗಾಗಿ ಅಲ್ಲೇ ಮತ್ತೂ ಇರಬೇಕಾಯಿತು. ಜನರ ಸೇವೆಯೇ ಅವರ ಧ್ಯೇಯವಾಯಿತು."

"ಅಣ್ಣಾ! ಅಲ್ಲಿ ಮತ್ತೇನೆಲ್ಲಾ ಮಾಡಿದರು?"

"ಈ ಆಂದೋಲನವು ನಡೆಯುವ ಹೊತ್ತಿಗೆ ಅದಕ್ಕಾಗಿ ಒಂದು ಸಂಸ್ಥೆಯನ್ನೇ ಏರ್ಪಡಿಸಬೇಕೆಂದು ಗಾಂಧಿ ಅಜ್ಜ ಬಯಸಿದರು."

"ಸಂಸ್ಥೆ. ಅದೇಕಣ್ಣಾ?"

"ಸಂಸ್ಥೆ ಜನರ ಐಕ್ಯಕ್ಕಾಗಿ; ಭಾರತೀಯರ ಶ್ರೇಯಸ್ಸಿಗಾಗಿ—ಅದೇ ಯೋಚನೆಯು ಫಲವಾಗಿಯೇ 'ನೇಟಾಲ್ ಇಂಡಿಯನ್ ಕಾಂಗ್ರೆಸ್' ಉತ್ಪನ್ನವಾಯಿತು. ಬಹಳ ಕಷ್ಟವಾದರೂ ಗಾಂಧೀಜಿ ನಾಯಕರಾಗಿ ನಡೆಸಿಕೊಂಡು ಮುನ್ನುಗ್ಗಿದರು. ಅದೇ ಸಂಸ್ಥೆಯು ಅಂಗವಾಗಿ ಅಶಿಕ್ಷಿತರಿಗೆ

ಶಿಕ್ಷಣವೀಯಲು 'ಕಾಲೋನಿಯಲ್ ಬಾನ್ ಎಂಡ್ ಇಂಡಿಯನ್ ಎಜ್ಯು ಕೇಶನಲ್ ಎಸೋಸಿಯೇಶನ್' ಕೂಡಾ ಸ್ಥಾಪಿಸಲಾಯಿತು. ಗಾಂಧೀಜಿ ಇಂಗ್ಲೆಂಡಿನವರಿಗೂ ಅಲ್ಲಿನ ಮಂದಿಗೂ ಭಾರತೀಯರಿಗೂ ಅಲ್ಲಿನ ಯಥಾರ್ಥ ಸ್ಥಿತಿ ತಿಳಿಸುವ ಬಗ್ಗೆ ಎರಡು ಪುಸ್ತಕಗಳನ್ನು ಬರೆದರು. ಪುಸ್ತಕ ಪ್ರಚಾರಕ್ಕೆ ಬಂದ ಪರಿಣಾಮವಾಗಿ ಅಲ್ಲಿನ ಸ್ಥಿತಿಗತಿಯರಿತು ದಕ್ಷಿಣ ಆಫ್ರಿಕದ ಮಂದಿಗೂ ಭಾರತೀಯರಿಗೂ ಮೈತ್ರಿ ಹುಟ್ಟಿತು. ಇಂಗ್ಲೆಂಡಿನಿಂದಲೂ ಕೂಡ ಆ ಬಗ್ಗೆ ಸಹಾಯ ದೊರೆಯಿತು."

"ಅಣ್ಣಾ! ಒಬ್ಬನಿಂದ ಜೀವಮಾನದಲ್ಲೇ ಮಾಡಲಾಗದ ಕೆಲಸವನ್ನು ಗಾಂಧೀಜಿ ಬೇಗಬೇಗನೇ ಪೂರಯಿಸುತ್ತಾ ಬಂದರಲ್ಲವೇ?"

"ತಮ್ಮಾ! ಅವರ ನೇತೃತ್ವಶಕ್ತಿ ಎಂತಹುದೋ ನನಗೂ ಅರಿಯದು. ಅವರ ಕಾರ್ಯಕಲಾಪ ಸಾಮಾನ್ಯ ವ್ಯಕ್ತಿಯಿಂದ ಮಾಡುವುದು ಅಸಾಧ್ಯವೇ ಸರಿ. ನನಗೂ ಇದನ್ನೆಲ್ಲಾ ನೆನೆದರೆ ಕನಸು ಕಟ್ಟಿದಂತಾಗುತ್ತಿದೆ. ಅಲ್ಲಿ ರುವಾಗಲೇ ಧನಿಯಿಂದಲಾಗಿ ಹಲ್ಲು ಮುರಿದು ಹೋದ 'ಬಾಲ ಸುಂದರಂ' ಎಂಬವರ ಬಗ್ಗೆ ಕೋರ್ಟು ಹತ್ತಬೇಕಾಯಿತು."

"ಅದರಲ್ಲೇನಾಯಿತಣ್ಣಾ!"

"ಅನ್ಯಾಯವಾಗಿ ಧನಿ ಹೊಡೆದರೆ ಅದಕ್ಕೆ ಶಿಕ್ಷೆಯಾಗದಿದ್ದೀತೇ? ಅವ ನಿಗೆ ಹೊಡೆದ ಬಗ್ಗೆ ಸಜೆ ವಿಧಿಸಬೇಕೆಂದು ತೀರ್ಪಾಯಿತು. ಗಾಂಧೀಜಿಗೆ ಸಜೆಯಾಗಬೇಕೆಂಬ ಯೋಚನೆಯಿರಲಿಲ್ಲ. ಭಾರತೀಯರ ಆ ಗುಲಾಮ ಗಿರಿಯನ್ನು ಕಿತ್ತೊಗೆಯಬೇಕೆಂದು ಹಾಗೆ ಮಾಡಿದರು. ಅನ್ಯಾಯವಾಗಿ ಹೊರಿಸುತಿದ್ದ ಕರದ ಬಗ್ಗೆ ಹೋರಾಡಿದರು."

"ಅಣ್ಣಾ! ಹೋರಾಟವೇ ಹೋರಾಟ! ಗಾಂಧಿ ಅಜ್ಜನಿಗೆ ನಿದ್ದೆ ಬಿದ್ದಿತ್ತೋ ಇಲ್ಲವೋ? ಹಗಲು ರಾತ್ರೆ ಜನರ ಉದ್ಧಾರ ಎಂದು ಕಷ್ಟಪಟ್ಟರಲ್ಲವೇ ನಮ್ಮಜ್ಜ?"

"ತಮ್ಮಾ! ಮಹಾತ್ಮರ ಜೀವನವೆಲ್ಲಾ ಹಾಗೆಯೇ ಸರಿ. ತನ್ನ ಸುಖ ವನ್ನು ಮರೆತವನು ಮಾತ್ರ ಜನರ ಸೇವೆಯನ್ನು ಮಾಡಬಲ್ಲನಷ್ಟೆ. ಇಂದು ನಮ್ಮ ನೆಹರು ಕೂಡ ಇದೇ ರೀತಿ ಕಷ್ಟಪಡುತ್ತಿದ್ದಾರಲ್ಲವೇ? ಪಾಪ!

ಭಾರತ! ಭಾರತ-ಎಂದು ಜೀವ ಬಿಡುವುದಕ್ಕೆ ತಯಾರಿದ್ದಾರೆ. ಆದರೆ ನಮ್ಮ ಜನರಿಗೆ ಮಾತ್ರ ಬುದ್ಧಿಯಿಲ್ಲ. ಇಡೀ ಜೀವನದಲ್ಲೇ ನಿಸ್ವಾರ್ಥಿಗಳಾಗಿ ದುಡಿದರೂ ಜನತೆ ದೂರುವುದಕ್ಕೆ ತೊಡಗುತ್ತದಲ್ಲ."

"ಅಣ್ಣಾ! ನೆಹರುಗಳನ್ನು ಬೈಯುತ್ತಾರೇನು?"

"ಇಲ್ಲ. ಕೆಲವರು ಹುಚ್ಚರು ಬಯ್ಯುತ್ತಾರೆ ಅಷ್ಟೆ."

"ಅಷ್ಟೇ ಅಲ್ಲವೇ? ಹುಚ್ಚ ಯಾರನ್ನು ಬೈಯದೆ ಬಿಡುತ್ತಾನೆ. ನೆಹರುಗಳು ಹುಟ್ಟಿದ್ದು ನಮ್ಮ ದೇಶದ ಭಾಗ್ಯ ಎಂದೆನ್ನಿಸುತ್ತಿದೆ. ಅಣ್ಣಾ! ಅವರ ಮಾತು ಎಂದರಣ್ಣಾ ಪೀಯೂಷ ತರಂಗಿಣಿ!"

"ಅದರಲ್ಲೇನು ಸಂಶಯ. ಜಗದ ಗಂಡು ವೀರಸಿಂಹ ನೆಹರು ನಮ್ಮ ನಾಯಕರಾದ್ದು ನಮ್ಮೆಲ್ಲರ ಭಾಗ್ಯ. ನಮ್ಮಜ್ಜನ ಪಟ್ಟದ ಶಿಷ್ಯರಲ್ಲವೇ ಅವರು?"

"ಅಣ್ಣಾ! ಎಲ್ಲಾ ದೇವರ ಇಚ್ಛೆ. ಒಂದು ವರ್ಷಕ್ಕೆಂದು ಆಫ್ರಿಕಕ್ಕೆ ಹೊರಟ ಗಾಂಧೀಜಿ ಅಲ್ಲಿಂದ ಬಿಟ್ಟು ಬರುವುದು ಅಸಾಧ್ಯ ಎನ್ನುವ ಹಾಗಾಯಿತಲ್ಲವೇ?"

"ಹೌದು. ಗಾಂಧೀಜಿ ಹೋಗಿ ಮೂರು ವರ್ಷ ಕಳೆಯಿತು. ಆರು ತಿಂಗಳ ಮಟ್ಟಿಗಾದರೂ ಒಮ್ಮೆ ಊರಿಗೆ ಹೋಗಿ ಬರುವುದೆಂದು ನಿಶ್ಚೈಸಿದರು."

"ಮನೆಯವರು ಗಾಂಧಿ ಅಜ್ಜನನ್ನು ಕಾಣುವುದಕ್ಕೆ ಎಷ್ಟು ಆತುರ ಪಡುತ್ತಿದ್ದರೋ ಏನೋ? ಅಣ್ಣ-ತಮ್ಮನ ಬರವನ್ನು ಹಾರೈಸುತ್ತಿದ್ದಿರಬಹುದು. ತಮ್ಮನ ಕತೆಯೆಲ್ಲಾ ತಿಳಿದು ತುಂಬಾ ಹಿಗ್ಗಿರಬಹುದು. ಕಸ್ತೂರಿಬಾ ಮತ್ತು ಮಕ್ಕಳಿಗೆ ಎಷ್ಟು ಆತುರವಿತ್ತೋ ಹೇಳುವುದೇ ಅಸಾಧ್ಯ."

"ಎಷ್ಟೋ ಕಾಲದ ನಂತರ ಕಾಣುವುದೆಂದರೆ ಹಾಗಾಗದಿರುತ್ತದೇನು? ಪ್ರೀತಿಯುಳ್ಳ ಮಂದಿಯ ಅಗಲು, ಪ್ರೀತಿಯನ್ನು ಬೆಳೆಯುವಂತೆ ಮಾಡುತ್ತದೆ. ಅಂತೂ ತುಂಬಾ ಆತುರವಿದ್ದಿರಬಹುದು."

"ಅಣ್ಣಾ! ಅಷ್ಟು ದಿನ ಗಾಂಧಿ ಅಜ್ಜನನ್ನು ಎಷ್ಟು ನೆನೆಯುತ್ತಿದ್ದರೋ ಏನೋ. ನನಗಣ್ಣಾ ನೀವು ಒಂದು ದಿನ ಮನೆಯಲ್ಲಿಲ್ಲದಿದ್ದರೆ ಬೇಸರ

ವಾಗುತ್ತದೆ. ಅಣ್ಣ ಯಾವಾಗ ಬರುವರೋ ಎಂದು ಹೊತ್ತು ಕಾಯುತ್ತಿರು ತ್ತೇನೆ. ಅಣ್ಣಾ! ಒಂದು ಕೇಳುತ್ತೇನೆ. ನಿಮಗೆ ನನ್ನನ್ನು ಬಿಟ್ಟು ಇರು ವುದಕ್ಕೆ ಸಾಧ್ಯವೇ?"

"ಇರದೆ ಏನು? ಆದರೆ ಮರೆಯುವುದು ಮಾತ್ರ ಅಸಾಧ್ಯ, ತಮ್ಮಾ!"

"ಆದರೆ ಬೇಸರ ಆಗದೇನು?"

"ಬೇಸರ ಆಗಬಹುದು. ದಿನನಿತ್ಯ ನೆನಪಾಗಬಹುದು, ಅದಿರಲಿ. ಗಾಂಧಿ ಅಜ್ಜ ಸುಮ್ಮಗೆ ಊರಿಗೆ ಹೊರಟುದಲ್ಲ. ಅಚೆ ಈಚೆ ತಿರುಗಾಡಿ ಅಲ್ಲಿನ ಪರಿಸ್ಥಿತಿಯನ್ನು ತಿಳಿದು ಅನುಭವ ಪಡೆಯುವುದೂ ಅವರ ಉದ್ದೇ ಶವೇ ಆಗಿತ್ತು."

"ಆದರೆ ಹಿಂತಿರುಗಿ ಬಂದವರು ಕೆಲಕಾಲವಾದರೂ ಮನೆಯಲ್ಲಿ ಸುಮ್ಮಗೆ ಸುಖವಾಗಿರಲಿಲ್ಲವೇ?"

"ಸುಖವಾಗಿಯೇ ಇದ್ದರು."

"ಅಣ್ಣಾ! ಇಷ್ಟೆಲ್ಲಾ ಕೆಲಸ ಮಾಡುವಾಗ ಎಲ್ಲಿಯ ಸುಖ!"

"ಬಲ್ಲವರಿಗೆ ಅದೇ ಸುಖವಾಗಿ ಕಾಣುವುದು. ಉತ್ತಮರು ಎಂದೂ ತಮ್ಮ ಹೊತ್ತನ್ನು ವ್ಯರ್ಥವಾಗಿ ಕಳೆಯುವಂತಿಲ್ಲ. ಅನ್ಯರ ಹಿತಕ್ಕಾಗಿ ಪರಿ ಶ್ರಮ ವಹಿಸುವುದೇ ಸುಖವೆಂದು ತಿಳಕೊಳ್ಳುವರು."

"ಅಣ್ಣಾ! ಈ ರೀತಿ ತಿಳಕೊಳ್ಳುವುದು ಬಹಳ ಕಷ್ಟಸಾಧ್ಯವೇ ಸರಿ. ಎಲ್ಲರಿಂದಲೂ ಹೀಗಿರಲು ಸಾಧ್ಯವೇನು?"

"ಸಾಧಿಸಿದರೆ ಸಾಧ್ಯವಾಗಬಹುದು. ಆದ್ದರಿಂದಲೇ ಎಲ್ಲರೂ ಮಹಾ ತ್ಮರೆನಿಸಿಕೊಳ್ಳುವುದಿಲ್ಲ!"

"ಊರಿಗೆ ಬಂದು ಏನೆಲ್ಲಾ ಮಾಡಿದರಣ್ಣಾ?"

"ರಾಜಕೋಟೆಗೆ ತಲಪಿದವರೇ ದಕ್ಷಿಣ ಆಫ್ರಿಕದ ಭಾರತೀಯರ ಸ್ಥಿತಿ ಯನ್ನು ಸರಿಯಾಗಿ ಜನರಿಗೆ ಸ್ಪಷ್ಟಪಡಿಸುವ ಬಗ್ಗೆ ಸಣ್ಣ ಹೊತ್ತಗೆಯೊಂದನ್ನು ಬರೆದರು. ಹಸುರುಬಣ್ಣದ ಹೊರವೈಯ ಆ ಪುಸ್ತಕವನ್ನೇ 'ಗ್ರೀನ್ ಪೇಂಪ್ಲೆಟ್' ಎಂದು ಕರೆಯುವರು. ಹಸುರು ಹೊತ್ತಗೆಯನ್ನು ಬೇರೆಬೇರೆ

ಕಡೆಗಳಿಗೆ ಕಳುಹಿ ಕೊಟ್ಟರು. ಹತ್ತುಸಾವಿರ ಪ್ರತಿಗಳನ್ನು ಅಚ್ಚುಹಾಕಿಸಿದ್ದರು. ಪತ್ರಿಕೆಗಳಿಗೂ ಬೇರೆಬೇರೆ ಊರಿನ ಪ್ರಸಿದ್ಧ ವ್ಯಕ್ತಿಗಳಿಗೂ ರವಾನಿಸಿ ಕೊಟ್ಟರು. ನಿನ್ನಂಥಾ ಎಳೆಯರೂ ಆಗ ಅವರಿಗೆ ತುಂಬಾ ಉಪಕಾರ ಮಾಡಿದರು."

"ಅಣ್ಣಾ! ಸಣ್ಣವರಿಂದ ಏನಾಗುತ್ತದೆಂದು ಇರಬಹುದು. ಆದರೂ ಗಾಂಧಿ ಅಜ್ಜನಿಗೆ ಮಕ್ಕಳನ್ನು ಕಂಡರೆ ತುಂಬಾ ಪ್ರೀತಿಯಂತಲ್ಲವೇ?"

"ಹೌದು. ಮಕ್ಕಳಿಂದೇನಾಗುವುದು? ಎಂದು ಕೇಳುತ್ತಿರುವೆಯಲ್ಲ! ಅವರವರ ಶಕ್ತಿಗನುಸಾರ ಸಹಾಯವನ್ನು ಮಾಡಲು ಎಲ್ಲರಿಂದಲೂ ಸಾಧ್ಯವೇ ಸರಿ. ಒಳ್ಳೆಯ ಮಕ್ಕಳು ಮನೆಯಲ್ಲಿ ಹೆತ್ತವರಿಗೆ ನೆರವಾಗುವುದಿಲ್ಲವೇ? ಅಂತೆಯೇ ನಮ್ಮಜ್ಜನಿಗೂ ಮಕ್ಕಳು ನೆರವಾದರು."

"ಅಣ್ಣಾ! ಹೌದು. ಅಂದು ನೀವು ರಾಮಾಯಣದ ಕತೆ ಹೇಳುವಾಗ ಅಳಿಲು ಮಳಲಲ್ಲಿ ಹೊರಳಾಡಿ ಸೇತುವೆಯ ಮೇಲೆ ಬಾಲ ಕೊಡವಿ ಶ್ರೀ ರಾಮನಿಗೆ ಸಹಾಯ ಮಾಡಿತು. ಅದರ ಸಾಹಸಕ್ಕೆ ಮೆಚ್ಚಿದ ಶ್ರೀ ರಾಮ ಬೆನ್ನು ತಡವಿದ್ದರಿಂದ ಬೆನ್ನಲ್ಲಿ ಅದಕ್ಕೆ ಮೂರುಗೆರೆಯಾಯಿತು ಎಂದು ಹೇಳಿದ್ದಿರಲ್ಲವೇ?"

"ನಿಜ. ಮಕ್ಕಳು ಪುಸ್ತಕಗಳನ್ನು ಅಂಚೆಗೆ ಕಳುಹುವ ಬಗ್ಗೆ ಹೆಸರು ವಿಳಾಸಗಳನ್ನೆಲ್ಲಾ ಬರೆದು ಕೊಟ್ಟು ಗಾಂಧೀಜಿಗೆ ತುಂಬಾ ನೆರವಾದರು. ಗಾಂಧೀಜಿಯ ಕಾರ್ಯದ ಬಗ್ಗೆ ಎಲ್ಲರ ಸಹಾನುಭೂತಿಯಿದ್ದಿತು. ಅದೇ ಹೊತ್ತಿಗೆ ಊರಲ್ಲಿ ಪ್ಲೇಗು ಹಬ್ಬಿದ್ದರಿಂದ ಶುಚಿತ್ವದ ಕುರಿತು ಗಾಂಧೀಜಿ ಎಚ್ಚರಿಕೆ ವಹಿಸಿದರು. ತಾವೇ ಕಸಬರಿಕೆ ಹಿಡಿದು ಓಣಿ ಓಣಿಗೂ ಸಾಗಿ ಜನರಿಗೆ ಉಪದೇಶಿಸಿ ಜನರ ಸಂಕಷ್ಟವನ್ನು ದೂರ ಮಾಡುವುದಕ್ಕೆ ಯತ್ನಿಸಿದರು."

"ಬೇರೆಯವರ ಮನೆ ನಿರ್ಮಲ ಮಾಡುವುದಕ್ಕೆ ಗಾಂಧೀಜಿ ಹೊರಟರೇ? ಪಾಪ. ಊರಿನ ಮಂದಿಯಲ್ಲಿ ಎಷ್ಟು ಆದರವೋ ನಮ್ಮಜ್ಜನಿಗೆ!"

"ಜನರ ಸೇವೆಯೇ ಜನಾರ್ದನನ ಸೇವೆ—ಎಂಬ ಮಾತನ್ನು ಕೇಳಿಲ್ಲವೇ? ಒಳ್ಳೆಯ ವ್ಯಕ್ತಿ ಫಲವೃಕ್ಷದಂತೆ ಅನ್ಯರಿಗಾಗಿ ಜೀವನವನ್ನು ಮಾಡುತ್ತಿರುವನು."

"ಅದೆಲ್ಲಾ ಇರಬಹುದು. ಅವರವರ ಮನೆ ಕಸ ತೆಗೆಯುವುದಕ್ಕೆ ನಾಚಿಕೆ ಪಡುತ್ತಾರಲ್ಲವೇ ನಮ್ಮ ಜನ. ಕಸ ತೆಗೆಯುವವಳು ಹೆಂಗಸು ಎನ್ನುತ್ತಾರಣ್ಣಾ! ನನಗೇಕೋ ವಿಸ್ಮಯವಾಗುತ್ತದೆ."

"ತಮ್ಮಾ! ತಿಳುವಳಿಕೆಯಿದ್ದವರು ಹಾಗೆಣಿಸುವುದಿಲ್ಲ. ಗಾಂಧೀಜಿ ಆ ಬಳಿಕ ಬೊಂಬೈಗೆ ಹೋದರು. ಆಫ್ರಿಕದ ಕುರಿತು ಭಾಷಣವಿತ್ತು ಅಲ್ಲಿನ ಪರಿಸ್ಥಿತಿಯನ್ನು ವಿಶದೀಕರಿಸಿದರು. ಗಾಂಧೀಜಿಯು ಮಾತಿಗೆ ಹೋದಲ್ಲೆಲ್ಲಾ ಸೈಗುಟ್ಟಿದರು. ಮದರಾಸಿಗೂ ಪೂನಕ್ಕೂ ತೆರಳಿದರು. ಕಲಕತ್ತೆ ಸೇರಿದಾಗಲೇ ಡರ್ಬಾನಿನಿಂದ 'ಕೂಡಲೇ ಹಿಂತಿರುಗಬೇಕು; ಪಾರ್ಲಿಮೆಂಟ್ ಸಭೆಯು ಜನವರಿಯಲ್ಲಿ ಸೇರಲಿದೆ'ಯೆಂದು ತಾರು ಬಂದಿತು. ಗಾಂಧೀಜಿ ಕೂಡಲೇ ದಕ್ಷಿಣ ಆಫ್ರಿಕಕ್ಕೆ ಹೊರಡಬೇಕಾಯಿತು."

---

— ೬ —

"ಅಣ್ಣಾ! ಈ ಬಾರಿ ಗಾಂಧಿ ಅಜ್ಜ ಮಾತ್ರ ದಕ್ಷಿಣ ಆಫ್ರಿಕಕ್ಕೆ ಹೊರಟರೇ? ಅಲ್ಲ........ನಮ್ಮಜ್ಜಿಯನ್ನೂ ಕರಕೊಂಡು ಹೋದರೇ?"

"ಅದೇನೋ ನಿನಗೆ ನಮ್ಮಜ್ಜಿಯ ಮೇಲೆ ಅಷ್ಟು ಕನಿಕರ!"

"ಅಲ್ಲಣ್ಣ! ಹೆಂಡತಿಯನ್ನು ಬಿಟ್ಟು ಹೋಗಿ ಬಿಟ್ಟರೇ ಎಂತ ನನ್ನ ಯೋಚನೆ. ಎಲ್ಲರಿಗೂ ಹೆಂಡತಿ ಎಂದರೆ ಅಷ್ಟು ಪ್ರೇಮ ಅಲ್ಲವೇ ಅಣ್ಣಾ! ನೀವಾದರೆ ಹೆಂಡತಿಯನ್ನು ಬಿಟ್ಟೀರೇನು?"

"ಅದಿರಲಿ ತಮ್ಮಾ! ನೀನಾದರೇನು ಮಾಡುವೆ? ಎಂದು ನನ್ನ ಪ್ರಶ್ನೆ."

"ನಾನು ಕರಕೊಂಡೇ ಹೋದೇನು?"

"ಆದರೆ ನೀನು ನನ್ನನ್ನಾದರೂ ಮರೆಯಬಹುದು ಅಲ್ಲವೇ? ಜೋಕೆ. ನೋಡು ನಿನಗೆ ಮದುವೆ ಮಾಡುವುದೇ ಇಲ್ಲ; ಹಾಗಿದ್ದರೆ?"

"ಅಣ್ಣಾ! ಹಾಗಿದ್ದರೆ ಬಹಳ ಸಂತೋಷ. ಹೆಂಡತಿ ಹೇಳಿದ ಹಾಗೆ ಕುಣಿದು ಹಾಳಾಗುವ ಕೆಲಸವಾದರೂ ಉಳಿಯಿತಲ್ಲಾ?"

"ತಮ್ಮಾ! ಎಷ್ಟು ಸುಲಭದಲ್ಲಿ ಜಾರಿ ಬಿಡುವೆಯೋ ನೀನು."

"ಅದಿರಲಿ; ಈ ಬಾರಿ ಎಲ್ಲರನ್ನೂ ಒಂದಿಗೆ ಕರಕೊಂಡೇ ಹೋದರೇ?"

"ಹೌದು. ಇದೇ ಗಾಂಧೀಜಿ ಹೆಂಡತಿ ಮಕ್ಕಳೊಂದಿಗೆ ಹೊರಟ ದೊಡ್ಡ ಪ್ರಯಾಣ; ಅದರಲ್ಲೂ ಕುಟುಂಬದೊಂದಿಗೆ ಜಲಪ್ರಯಾಣ ಮಾಡುವುದು ಇದೇ ಮೊದಲು ತಾನೆ?"

"ಆಹಾ! ನಮ್ಮ ಅಜ್ಜನಿಗೆ ಎಷ್ಟು ಆನಂದವೋ ಏನೋ!"

"ತಮ್ಮಾ! ಆನಂದವೆಲ್ಲಿ? ಎಲ್ಲರೂ ಸುಖವಾಗಿ ಮುಟ್ಟಿದ ಮೇಲೆ ತಾನೆ ಆನಂದ. ಹಡಗು ಹತ್ತಿಯಾಯಿತು. ಸಮುದ್ರ ಗರ್ಜನೆ ಜೋರಾಯಿತು. ನೀರು ಉಕ್ಕಿ ಬರತೊಡಗಿತು. ಮೋಡ ಮುಸುಕಿ ಕತ್ತಲೆಯೇ ಆವರಿಸಿತು. ಹಡಗು ಏನಾಗುವುದೋ ಎಂಬ ಭಯ ಎಲ್ಲರಲ್ಲೂ ಉತ್ಪನ್ನವಾಯಿತು."

"ಅಯ್ಯೋ ಪಾಪ! ಎಷ್ಟು ಹೆದರಿಕೆಯಾಯಿತೋ?"

"ಎಲ್ಲರೂ ದೇವರಲ್ಲಿ ಮೊರೆಯಿಟ್ಟರು. ಅಂತೂ ಸೂರ್ಯದೇವನ ದರ್ಶನವುಂಟಾಗಿ ಕೊನೆಗೆ ಹರುಷವೇ ಉಂಟಾಯಿತು."

"ಅಣ್ಣಾ! ಆದರೆ ಸುಖವಾಗಿ ಆಫ್ರಿಕಕ್ಕೆ ತಲಪಿದರಲ್ಲವೇ?"

"ಗಾಂಧೀಜಿ ತಲಪಿದರು. ಆದರೆ ಅಲ್ಲಿನ ಜನರಿಗೆ ಗಾಂಧೀಜಿ ಅಲ್ಲಿನ ಕುರಿತು ಭಾರತದಲ್ಲಿ ಅಲ್ಲಲ್ಲಿ ಭಾಷಣ ಕೊಟ್ಟದ್ದರಿಂದ ಹೊಟ್ಟೆಯುರಿಯುಂಟಾಗಿತ್ತು. ಅದಕ್ಕಾಗಿ ಗಾಂಧೀಜಿ ಒಮ್ಮೆ ಇಲ್ಲಿಗೆ ಬರಲಿ ಎಂದು ಕಾದಿದ್ದರು."

"ಆದರೆ ಗಾಂಧಿ ಅಜ್ಜನನ್ನೇನು ಮಾಡಿದರಣ್ಣಾ?"

"ಗಾಂಧೀಜಿ ದಾರಿಯಲ್ಲಿ ಸಾಗುತ್ತಿರುವಾಗ ಗಾಂಧೀಜಿಯ ಮೇಲೆ ಕೊಳೆತ ಕೋಳಿತತ್ತಿಯನ್ನೂ ಮೆಟ್ಟು ಕಲ್ಲುಮಣ್ಣುಗಳನ್ನೂ ತಿಳಿಗೇಡಿಗಳಂತೆ ಎಸೆದು ಬಿಟ್ಟರು."

"ಅಣ್ಣಾ! ಅವರೆಂಥಾ ತಿಳಿಗೇಡಿಗಳು! ಇದ್ದುದನ್ನು ಗಾಂಧಿ ಅಜ್ಜ ಹೇಳಿದರೆ ಈ ರೀತಿ ಮಾಡುವುದೇ? ಅದಕ್ಕೂ ಒಂದು ನ್ಯಾಯವಾದ ಮಾರ್ಗ ವಿಲ್ಲವೇ?"

"ತಮ್ಮಾ! ಕಂಡುದನ್ನು ಕಂಡಂತೆ ಹೇಳಿದರೆ ಕೆಂಡದಂಥಾ ಸಿಟ್ಟು ಬರುವುದಂತೆ. ಗಾಂಧೀಜಿಯ ಮೇಲೆ ಒಂದೇ ಸವನೆ ಕಲ್ಲಿನ ಮಳೆ ಸುರಿಯ ತೊಡಗಿದರು. ವಿಶೇಷ ಗಾಯವೂ ಆಯಿತು. ಅವರು ಕೊಲ್ಲುವುದಕ್ಕೂ ತಯಾರಾದರು."

"ಅಣ್ಣಾ! ಆದರೆ ಅಲ್ಲಿಂದ ಹೇಗೆ ಪಾರಾದರು?"

"ತಮ್ಮಾ! ಗಾಂಧೀಜಿಯ ಮುಂಡಾಸನ್ನೂ ಕೂಡ ಹಾರಿಸಿಬಿಟ್ಟರು. ಈ ಅತ್ಯಾಚಾರವನ್ನು ನೋಡಿ ಆಂಗ್ಲ ಮಹಿಳೆಯೊಬ್ಬಳು ಗಾಂಧೀಜಿಯೆಡೆಗೆ ನುಗ್ಗಿ ಬಂದಳು. ಗಾಂಧೀಜಿಗೆ ವಿಶೇಷ ಪೆಟ್ಟಾದ್ದರಿಂದ ಅವರು ಮೂರ್ಛೆ ತಪ್ಪಿದರು. ಗಾಂಧೀಜಿಯ ಮೈಗೆ ಬೀಳದಂತೆ ತನ್ನ ಮೈಯೊಡ್ಡಿ ಅವಳು ತಡೆದಳು."

"ಅಣ್ಣಾ! ಗಾಂಧಿ ಅಜ್ಜನಲ್ಲಿ ಕನಿಕರಗೊಂಡ ಆ ಪುಣ್ಯಮಾತೆಯಾರಣ್ಣಾ!"

"ಪೋಲೀಸ್ ಸುಪರಿಂಟೆಂಡೆಂಟರ ಧರ್ಮಪತ್ನಿಯೇ ಅವರಾಗಿದ್ದರು. ಭಾರತೀಯ ಹುಡುಗನೊಬ್ಬನು ಪೋಲೀಸು ನಿಲ್ದಾಣಕ್ಕೆ ಓಡಿ ಹೋಗಿ ಈ ಸಮಾಚಾರವನ್ನು ತಿಳಿಸಿದನು. ರಕ್ಷಣೆಗಾಗಿ ಪೋಲೀಸರ ತಂಡವೂ ಬಂತು."

"ಅಣ್ಣಾ! ಮಕ್ಕಳು ಮತ್ತು ಕಸ್ತೂರಿಬಾ ಅವರು ಏನು ಮಾಡುತಿದ್ದರಣ್ಣಾ! ಪಾಪ ಅವರೂ ಈ ಪೆಟ್ಟು ತಿಂದರೇ?"

"ಅವರನ್ನು ಮೊದಲೇ ಸುರಕ್ಷಿತ ಸ್ಥಳಕ್ಕೆ ಕಳುಹಲಾಗಿತ್ತು. ಪೋಲೀಸ್ ಸುಪರಿಂಟೆಂಡೆಂಟರಾದ ಅಲೆಕ್ಸಾಂಡರ್ ತಮ್ಮ ಗೆಳೆಯರಾದ ರುಸ್ತುಮ್‌ಜೀಯವರಲ್ಲಿಗೇ ಗಾಂಧೀಜಿಯನ್ನು ಸಾಗಿಸಿದರು. ಡಾಕ್ಟರರು ಬಂದು ಗಾಂಧೀಜಿಯ ಚಿಕಿತ್ಸೆ ನಡೆಸುತ್ತಿದ್ದಾಗಲೂ ಕೆರಳಿದ ಮಂದಿ ಗಾಂಧಿ ನಮಗೆ ಬೇಕೆಂದು ಒದರುತ್ತಿದ್ದರು. ಗಾಂಧೀಜಿಯ ವೇಷ ಬದಲಾಯಿಸಿ ಅಲ್ಲಿಂದ ಬೇರೆಡೆಗೆ ಕಳುಹಿದರು. ಉದ್ರೇಕಗೊಂಡ ಮಂದಿ ಅಲ್ಲಿ ಗಾಂಧೀಜಿಯಿಲ್ಲವೆಂಬುದನ್ನು ತಿಳಿದು ಚದರಿದರು."

"ಅಣ್ಣಾ! ಗಾಂಧೀಜಿಯನ್ನು ಆ ಮಹಿಳೆ ಕಾಪಾಡದಿದ್ದರೆ ಕೊಂದೇ ಬಿಡುತ್ತಿದ್ದರೋ ಏನೋ! ಈ ರೀತಿಯೆಲ್ಲಾ ಮಾಡಿದವರಿಗೆ ಅಲ್ಲಿ ಶಿಕ್ಷೆ ಕೊಡುತ್ತಿರಲಿಲ್ಲವೇನು? ಅಲ್ಲಿನ ಮಂದಿಗೆ ನೀತಿಯೆಂಬುದೇ ಇಲ್ಲವೇ?"

"ತಮ್ಮಾ! ಗಾಂಧೀಜಿಯ ಮನೋವೃತ್ತಿ ವಿಚಿತ್ರವಾದ್ದಲ್ಲವೇ? ಕರುಣಾಮೂರ್ತಿಯಲ್ಲವೇ ನಮ್ಮಜ್ಜ. ಈ ರೀತಿ ತಂಟೆ ಕೊಟ್ಟ ತುಂಟರನ್ನು ಶಿಕ್ಷೆಗೆ ಗುರಿಪಡಿಸುವುದಾಗಿ ಸರಕಾರ ಗಾಂಧೀಜಿಗೆ ತಿಳಿಸಿತು. ಅದಕ್ಕೆ ಗಾಂಧಿ ಅಜ್ಜ ಒಪ್ಪಲಿಲ್ಲ. ಸತ್ಯವನ್ನು ತಿಳಿದ ಮೇಲೆ ತಪ್ಪುಗಾರರು ಪಶ್ಚಾತ್ತಾಪಪಡುವರು; ತನಗೆ ಕೊಟ್ಟ ಹಿಂಸೆಗಾಗಿ ಅವರಿಗೆ ಶಿಕ್ಷೆ ವಿಧಿಸುವುದು ಬೇಡವೆಂದೇ ಹೇಳಿಬಿಟ್ಟರು."

"ಅಬ್ಬಾ! ಗಾಂಧಿ ಅಜ್ಜನ ಮನಸ್ಸೆಷ್ಟು ಕೋಮಲವೋ!"

"ತಮ್ಮಾ! ಬೆಣ್ಣೆಗಿಂತಲೂ ಮೃದು ನಮ್ಮಜ್ಜನ ಹೃದಯ. ಎಲ್ಲರಿಗೂ ಗಾಂಧಿ ಅಜ್ಜನ ಸಹನೆಯನ್ನೂ ಉಚ್ಚ ಭಾವನೆಯನ್ನೂ ಕಂಡು ವಿಸ್ಮಯವೇ ಆಯಿತು. ಅವರು ಅಲ್ಲಿನ ಮಂದಿಯ ವಿಚಾರವಾಗಿ ನಿಂದೆಗೈದಿಲ್ಲವೆಂದೂ ಸತ್ಯಸಂಗತಿಯನ್ನು ಬಹಿರಂಗಪಡಿಸಿರುವರೆಂದೂ ಜನತೆಗರುಹಲು ತಮ್ಮ ಭಾಷಣದ ಸಾರವನ್ನೆಲ್ಲಾ ಪತ್ರಿಕೆಗಳ ಮೂಲಕ ಪ್ರಚಾರಗೊಳಿಸಿದರು. ಇದರಿಂದಲಾಗಿ ಗಾಂಧೀಜಿಯ ಕೀರ್ತಿ ಮತ್ತಷ್ಟು ಹಬ್ಬಿತು. ಅಲ್ಲಿ ವಕಾಲತ್ತನ್ನು ನಡೆಸುವುದಕ್ಕೆ ತೊಡಗಿದರು. ಗಾಂಧೀಜಿಯ ಹೆಸರು ಇಷ್ಟರಲ್ಲೇ ಚೆನ್ನಾಗಿ ಹಬ್ಬಿದ್ದರಿಂದ ವಕಾಲತೂ ಚೆನ್ನಾಗಿ ನಡೆಯುತ್ತಿದ್ದಿತು."

"ಅಣ್ಣಾ! 'ಆದದ್ದೆಲ್ಲಾ ಒಳಿತೇ ಆಯಿತು ಮಾಧವನಂಘ್ರಿಯ ಪೂಜಿಪುದಕ್ಕೆ' ಎಂದು ಪುರಂದರದಾಸರು ಹಾಡಿದ್ದಾರಂತೆ. ಹಾಗೆಯೇ ಗಾಂಧೀಜಿಯ ಕಷ್ಟವೆಲ್ಲಾ ಅವರನ್ನು ಮತ್ತಷ್ಟು ಉನ್ನತ ಸ್ಥಿತಿಗೇರಿಸುತ್ತಿತ್ತಲ್ಲವೇ?"

"ಆದ್ದರಿಂದಲೇ ಎನ್ನುತ್ತಾರಲ್ಲವೇ ಕಷ್ಟ ಬಂದಾಗ ಎದೆಗುಂದಬಾರದು; ಆದುದೆಲ್ಲಾ ಒಳಿತಿಗಾಗಿ ಎಂದು ತಿಳಿಯಬೇಕೆಂದು? ಗಾಂಧೀಜಿಯ ಬಗ್ಗೆ ತಾವು ತಪ್ಪು ಮಾಡಿದ್ದೇವೆಂದು ಆ ಬಳಿಕ ತಿಳಕೊಂಡರು."

"ಅಣ್ಣಾ! ಗಾಂಧೀಜಿಯ ತತ್ವ ಸಾಮಾನ್ಯರ ಕಣ್ಣಿಗೆ ಗೋಚರಿಸದಣ್ಣಾ! ಅವರ ದೃಷ್ಟಿ ಎಂತಹುದೋ ಎಂದೆನ್ನಿಸುತ್ತಿದೆ. ನಮ್ಮಜ್ಜ ಎಂಬ ಹೆಮ್ಮೆಯೂ ಆಗುತ್ತಿದೆ."

"ನಮ್ಮಜ್ಜ ಎಂಬ ಅಭಿಮಾನ ನಮಗಿಲ್ಲದೆ ಹೋದರೆ ನಾವು ಮನುಷ್ಯರೇನು? ನಮ್ಮಜ್ಜ ಗಾಂಧಿ ಅಜ್ಜ ಎನ್ನಬೇಕಾದರೆ ನಾವು ಮಾಡಿದ ಪುಣ್ಯ

ಎಷ್ಟೆಂದು ಹೇಳಲಿ! ತಮ್ಮಾ! ನಮ್ಮಜ್ಜ ಜನರ ಸೇವೆಗಾಗಿ ದಕ್ಷಿಣ ಆಫ್ರಿಕಕ್ಕೆ ಹೆಂಡತಿ ಮಕ್ಕಳೊಂದಿಗೆ ತೆರಳಿದರೇನೋ ನಿಜ. ಆದರೆ ಮಕ್ಕಳ ವಿದ್ಯಾಭ್ಯಾಸವನ್ನು ಹೇಗೆ ಚೆನ್ನಾಗಿ ಪೂರೈಸಲಿ ಎಂಬುದು ಗಾಂಧೀಜಿಗೆ ಒಂದು ಕಷ್ಟದ ವಿಷಯವೇ ಆಯಿತು."

"ಏನಣ್ಣಾ! ಅಲ್ಲಿ ಶಾಲೆಯಿರಲಿಲ್ಲವೇ?"

"ಶಾಲೆಯಿದ್ದರೇನು? ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ಕೊಡದೆ ಯಾವ ಜ್ಞಾನವುಂಟಾದೀತು? ಮಕ್ಕಳಿಗೆ ತಕ್ಕ ವಿದ್ಯೆಯನ್ನೇ ಕೊಡಬೇಕೇ ಹೊರತು ವೃಥಾ ಶಾಲೆಗೆ ಕಳುಹುವುದರಿಂದ ಆಗುವ ಲಾಭವಾದರೂ ಏನು? ಮಕ್ಕಳಿಗೆ ಸ್ವತಂತ್ರ ಭಾವನೆಯು ಉತ್ಪನ್ನವಾಗಲಿರುವ ಶಿಕ್ಷಣವೇ ಅಗತ್ಯವೆಂದು ಅವರು ಮನಗೊಂಡಿದ್ದರು. ಅದಕ್ಕಾಗಿ ಅವರು ಮನೆಯಲ್ಲೇ ಬೋಧಕರನ್ನಿಟ್ಟು ವಿದ್ಯಾಭ್ಯಾಸದ ಏರ್ಪಾಡನ್ನು ಮಾಡಬೇಕಾಯಿತಲ್ಲದೆ ತಾವೇ ಮಕ್ಕಳಿಗೆ ಹೇಳಿಕೊಡುವುದಕ್ಕೂ ತೊಡಗಿದರು."

"ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಗಾಂಧೀಜಿ ತುಂಬಾ ಆಸಕ್ತಿ ತೋರುತ್ತಿದ್ದರಲ್ಲವೇ? ನಮ್ಮಜ್ಜನಿಗೆ ಮಕ್ಕಳೇ ಜೀವ ಅಲ್ಲವೇ?"

"ತಮ್ಮಾ! ಇಂದಿನ ಮಕ್ಕಳೇ ದೇಶದ ಮುಂದಿನ ವೀರರಲ್ಲವೇ? ಅವರಿಗೆ ಯೋಗ್ಯ ಶಿಕ್ಷಣವನ್ನೊದಗಿಸದೆ ಹೋದರೆ ಹೆತ್ತವರ ತಪ್ಪಾಗುವುದಿಲ್ಲವೇ? ಗಾಂಧಿ ಅಜ್ಜ ಮಕ್ಕಳ ಶಿಕ್ಷಣದ ಬಗ್ಗೆ ತುಂಬಾ ಎಚ್ಚರ ವಹಿಸಿದ್ದರು. ಆಫ್ರಿಕದಲ್ಲಿರುವಾಗಲೇ ಅವರಿಗೆ ಇನ್ನೊಂದು ಗಂಡುಮಗು ಹುಟ್ಟಿತು."

"ಆದರೆ ಮೂರು ಮಕ್ಕಳ ತಂದೆ ಆಗಿಬಿಟ್ಟರಲ್ಲವೇ ನಮ್ಮಜ್ಜ!"

"ಹೌದು. ಪ್ರಾಯದಲ್ಲಿ ಗಾಂಧಿ ಅಜ್ಜ ಚಿಕ್ಕವರಾಗಿದ್ದರೂ ಬುದ್ಧಿಯಲ್ಲಿ ಆಗಲೇ ಹಿರಿಯರಾಗಿದ್ದರು. ಅಂತೆಯೇ ಮಕ್ಕಳ ತಂದೆಯೂ ಆದರು. ಸೇವೆ ಮಾಡುವುದೆಂದರೆ ನಮ್ಮಜ್ಜನಿಗೆ ಮೆಚ್ಚಿನ ಕೆಲಸ. ಅವರ ಮೂರನೆ ಮಗನ ಜನ್ಮಕಾಲದಲ್ಲಿ ಗಾಂಧೀಜಿಯೇ ಸೂಲಗಿತ್ತಿಯಾದರು."

"ಅದೇಕಣ್ಣಾ! ಅಷ್ಟು ಸ್ವತಂತ್ರ ಯೋಚನೆಯೇ?"

"ವಿಚಿತ್ರ ಪ್ರಶ್ನೆ ನಿನ್ನದು. ಹಾಗಲ್ಲ, ಡಾಕ್ಟರರು ಸಿಗಲಿಲ್ಲ. ಥಟ್ಟನೇ ಕಸ್ತೂರಿಬಾ ಅವರ ವೇದನೆ ಜೋರಾಗ ತೊಡಗಿತು. ಮಿಡ್‌ವೈಫ್ ಕೂಡ

ದೊರೆಯಲಿಲ್ಲ ಆ ಪರವೂರಲ್ಲಿ. ಮತ್ತೇನು ಮಾಡಲಿ? ತಡ ಮಾಡಿದರೆ ಕಸ್ತೂರಿಬಾ ಅವರಿಗೆ ಕೆಡುಕುಂಟಾಗಬಹುದು. ಅವರು ಅದರ ಮೊದಲೇ ಪುಸ್ತಕಗಳನ್ನು ಓದಿ ಬಲ್ಲವರಿದ್ದರಿಂದ ಹೆರಿಗೆಯ ಕೆಲಸಕ್ಕೆ ಹೇಸದೆ ಮುಂದೆ ಬಂದರು."

"ಗಾಂಧಿ ಅಜ್ಜ ಮಾಡದ ಕೆಲಸ ಇಲ್ಲ. ಅವರು ಹೇಸಲಿಲ್ಲವೇ?"

"ಸೇವಕನಾಗಿರ ಬಯಸಿದವನು ಹೇಸುವುದು ಸಾಧ್ಯವೇನು? ಅನ್ಯರ ಸೇವೆಯೇ ತನ್ನ ಜೀವನದ ಗುರಿಯೆಂದು ತಿಳಕೊಂಡ ಗಾಂಧಿ ಅಜ್ಜ ಒಳ್ಳೆಯದಕ್ಕಾಗಿ ಉಳ್ಳ ಯಾವ ಕೆಲಸಕ್ಕೂ ಹೇಸಿದವರಲ್ಲ."

"ಅಣ್ಣಾ! ಎಲ್ಲರೂ ಬಾಯಲ್ಲಿ ಹಾಗೆ ಮಾಡಬೇಕು; ಹೀಗಿರಬೇಕು ಎಂದು ಹೇಳಬಹುದು. ಆದರೆ ಅಂದಂತೆ ಮಾಡಿ ತೋರಿಸುವುದಕ್ಕೆ ಗಾಂಧಿ ಅಜ್ಜನ ಹೊರತು ಮತ್ತಾರಿಂದಲೂ ಸಾಧ್ಯವಿಲ್ಲ."

"ತಮ್ಮಾ! ಗಾಂಧಿ ಅಜ್ಜ ಅಂದಂತೆ ಮಾಡುತಿದ್ದರು. ಆದರೆ ತಾವು ಆಚರಣೆಯಲ್ಲಿಟ್ಟುಕೊಂಡವುಗಳನ್ನೆಲ್ಲಾ ಜನರಿಗೆ ಉಪದೇಶಿಸುತ್ತಿರಲಿಲ್ಲ. ಸಾಮಾನ್ಯ ಜನರಿಂದ ಆಚರಣೆಗೆ ತರಬಹುದಾದ ವಿಷಯಗಳನ್ನು ಮಾತ್ರ ಉಪದೇಶಿಸುತಿದ್ದರು. ಗಾಂಧೀಜಿಯಂತೆ ನಡೆದುಕೊಳ್ಳಲು ಎಲ್ಲರಿಂದಲೂ ಸಾಧ್ಯವೇನು? ಹಾಗಿದ್ದರೆ ಪ್ರಪಂಚದಲ್ಲಿ ಇಷ್ಟು ಗೊಂದಲವಿರುತ್ತಿರಲಿಲ್ಲ. ಗಾಂಧಿ ಅಜ್ಜ ಅತಿ ಮಾನುಷ ವ್ಯಕ್ತಿಗಳೇ ನಿಜ. ಇಷ್ಟರಲ್ಲೇ ಬ್ರಹ್ಮಚರ್ಯ ಪಾಲಿಸಿಕೊಂಡು ಬರಬೇಕೆಂದು ಗಾಂಧಿ ಅಜ್ಜನಿಗೆ ಕಂಡಿತು."

"ದಿನದಿನಕ್ಕೂ ಹೊಸಹೊಸ ಯೋಚನೆಯೇ ಆಯಿತು ನಮ್ಮಜ್ಜನಿಗೆ."

"ಅದೇ ನಮ್ಮಜ್ಜನ ಕೆಲಸ. ದಿನನಿತ್ಯ ಅವರ ಮನಸ್ಸು ಸತ್ಯವನ್ನರಸುತಿತ್ತು. ಹಾಗೆ ಮಾಡಿದರೇನು? ಹೀಗೆ ಮಾಡಿದರೇನು? ಯಾವುದು ಒಳ್ಳೆಯದು? ಹೇಗೆ ಜನರ ಸೇವೆ ಮಾಡಬಹುದು; ಸ್ವತಂತ್ರವಾಗಿರಬಹುದು? ಇತ್ಯಾದಿ ಯೋಚನೆ ಸದಾ ಅವರ ಮನಸ್ಸಿನಲ್ಲಿದ್ದಿತು."

"ಆದರೆ ಬ್ರಹ್ಮಚರ್ಯ ಪಾಲಿಸಿದರೇ?

"ಗಾಂಧಿ ಅಜ್ಜನಿಂದ ಅಸಾಧ್ಯವಾದ ಕೆಲಸವೂ ಉಂಟೇನು? ಮದುವೆಯಾಗಿದ್ದ ಅವರಿಗೆ ಬ್ರಹ್ಮಚರ್ಯ ರಕ್ಷಣೆ ಬಹು ಕಷ್ಟವಾಗಿಯೇ ಕಂಡಿತು.

ಬ್ರಹ್ಮಚರ್ಯದ ಮಹತ್ವದ ಕುರಿತು ಕಸ್ತೂರಿ ಬಾ ಅವರಿಗೂ ಬೋಧಿಸಿದರು. ಬ್ರಹ್ಮಚಾರಿಯಾಗಿರುವವನು ಮೊದಲು ಇಂದ್ರಿಯ ನಿಗ್ರಹ ಮಾಡಿಕೊಳ್ಳಬೇಕೆಂದು ಅವರಿಗನ್ನಿಸಿತು. ಈ ಯೋಚನೆಯಿಂದಲಾಗಿ ಇಂದ್ರಿಯ ನಿಗ್ರಹ ಮಾಡುವ ಬಗ್ಗೆ ಆಹಾರದಲ್ಲಿಯೂ ತಕ್ಕ ನಿಯಮವನ್ನನುಸರಿಸಬೇಕಾಯಿತು. 'ವಿಷಯ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ' ಎಂಬುದನ್ನವರು ತಿಳಕೊಂಡಿದ್ದರು. ಬಾಹ್ಯ ಸುಖವನ್ನೆಲ್ಲಾ ತ್ಯಜಿಸಿ ಸತ್ಯಸುಖಕ್ಕಾಗಿ ಯತ್ನಿಸುವುದೇ ಜೀವನದ ಧರ್ಮವೆಂದು ತಿಳಕೊಂಡರು."

"ಅಣ್ಣಾ! ಅವರು ಬ್ರಹ್ಮಚಾರಿಗಳಾಗಿ ತಪಸ್ಸು ಮಾಡುವುದಕ್ಕೆ ಯೋಚನೆ ಮಾಡಿದರೇ? ದೇವರಲ್ಲಿ ಅಚಲವಾದ ವಿಶ್ವಾಸ ಅವರಿಗಿತ್ತಲ್ಲವೇ?"

"ನಮ್ಮಜ್ಜ ತಪಸ್ಸು ಮಾಡುವುದಕ್ಕಾಗಿ ಕಾಡಿಗೋಡಿ ಹೋಗಲಿಲ್ಲ. ಕೇವಲ ತನ್ನ ಸುಖವನ್ನೇ ಸಾಧಿಸುವ ಉದ್ದೇಶ ಅವರಲ್ಲಿರಲಿಲ್ಲ. ಆತ್ಮ ಕಲ್ಯಾಣವನ್ನು ಮಾತ್ರ ಸಾಧಿಸಿಕೊಂಡ ಮಹಾಪುರುಷರು ಪ್ರಪಂಚದಲ್ಲಿ ಅನೇಕ ಇರಬಹುದು. ಸಂಸಾರದಲ್ಲಿದ್ದು ಹೇಗೆ ಆದರ್ಶ ಜೀವನವನ್ನು ಕೈಗೊಳ್ಳಬಹುದೆಂಬುವಕ್ಕೆ ನಮ್ಮಜ್ಜನೇ ನಿದರ್ಶನ. ಬಟ್ಟೆಯನ್ನು ಸ್ವತಃ ಮಡಿ ಮಾಡುವುದಕ್ಕೂ ಗಾಂಧಿ ಅಜ್ಜ ಹಿಂದುಳಿಯಲಿಲ್ಲ."

"ಅವರನ್ನು ನೋಡಿ ಯಾರೂ ನಗಲಿಲ್ಲವೇ? ಅಗಸನ ಹಾಗೆ ಬಟ್ಟೆ ಮಡಿ ಮಾಡುತ್ತಾರೆಂದು ಖಂಡಿತ ಹೇಳದೆ ಇರಲಾರರು."

"ಗಾಂಧೀಜಿ ಅನ್ಯರ ಇಂಥಾ ಮಾತಿಗೆಲ್ಲಾ ಬೆಲೆ ಕೊಟ್ಟವರೇ ಅಲ್ಲ. ಹೊತ್ತಿಗೆ ಸರಿಯಾಗಿ ಬಟ್ಟೆಯನ್ನು ಮಡಿವಾಳ ತಂದು ಕೊಡುತ್ತಿರಲಿಲ್ಲ. ಪುಸ್ತಕ ತರಿಸಿ, ಹೇಗೆ ಮಡಿ ಮಾಡುವುದೆಂದು ಓದಿ ತಿಳಿದು ಚೆನ್ನಾಗಿ ಮಡಿ ಮಾಡುವುದಕ್ಕೂ ಇಸ್ತ್ರಿ ಮಾಡುವುದಕ್ಕೂ ಕಲಿತರು. ಮೊದಮೊದಲು ಅಷ್ಟು ಸರಿಯಾಗದೆ ನಗೆಗೀಡಾದರೂ ಕೊನೆಗೆ ಬಹಳ ನೈಪುಣ್ಯಗೊಂಡರು. ಗೋಖಲೆಯವರೂ ಕೂಡ ಇವರ ಕೆಲಸ ಕಂಡು ಬೆರಗಾಗಿದ್ದರು."

"ನಮ್ಮಜ್ಜ ಸರ್ವಜ್ಞನೇ ಸರಿ."

"ಅದರಲ್ಲೇಕೆ ಸಂಶಯ. ಗಾಂಧೀಜಿ ಒಮ್ಮೆ ಡರ್ಬಾನಿನಲ್ಲಿ ಯುರೋಪಿಯನರ ಕ್ಷೌರಿಕನಲ್ಲಿಗೆ ತೆರಳಿದ್ದರು. ಭಾರತೀಯರನ್ನು ಅಲ್ಲಿ ಅಸ್ಪೃಶ್ಯ

ರಂತೆ ಕಾಣುತ್ತಿದ್ದರು. ಕ್ಷೌರಿಕನು ಕ್ಷೌರ ಮಾಡಲು ಒಪ್ಪದ್ದರಿಂದ ಗಾಂಧೀಜಿ ಸ್ವತಃ ಕ್ಷೌರ ಮಾಡಿಕೊಳ್ಳಲು ಯತ್ನಿಸಿದರು. ಹಿಂಬದಿಯಿಂದ ಸ್ವತಃ ನಾಜೂಕಾಗಿ ಕತ್ತರಿಸಿಕೊಳ್ಳುವುದು ಕಷ್ಟವೇ ಆಯಿತು. ಸಾಧ್ಯ ವಾದಷ್ಟು ಸ್ವತಂತ್ರವಾಗಿದ್ದು ಬಂದ ಕಷ್ಟಗಳನ್ನೆಲ್ಲಾ ಇದಿರಿಸಿದರು."

"ಅಣ್ಣಾ! ಭಾರತೀಯರಿಗೆ ಕ್ಷೌರ ಮಾಡಿದಲ್ಲಿ ಕ್ಷೌರಿಕನಿಗೆ ಆಗುವ ಕೊರತೆಯೇನು?"

"ಕೊರತೆಯೇನು? ಬಿಳಿಯರು ಮಾತ್ರ ಭಾರತೀಯರ ಕ್ಷೌರ ಮಾಡಿ ದಲ್ಲಿ ಆತನನ್ನು ಹೀನೈಸುತ್ತಿದ್ದರು. ಮತ್ತೆ ಅವನೆಡೆಗೆ ಬರುತ್ತಿರಲಿಲ್ಲ."

"ಅಬ್ಬಾ! ಭಾರತೀಯರ ಮೇಲೆ ಇಷ್ಟೊ ತಾತ್ಸಾರವೇ? ನಿಜವಾಗಿ ಗಾಂಧಿ ಅಜ್ಜನಿಗೆ ಈ ಪರಿಸ್ಥಿತಿಯನ್ನು ಕಂಡು ಎಷ್ಟು ದುಃಖವಾಯಿತೋ ಏನೋ!"

"ತಮ್ಮಾ! ಭಾರತೀಯರ ದುಃಸ್ಥಿತಿಗಾಗಿ ಅವರು ನಿಮಿಷ ನಿಮಿಷಕ್ಕೂ ಮರುಗುತ್ತಿದ್ದರು. ಒಳಿತಿಗಾಗಿ ಯತ್ನಿಸುತ್ತಿದ್ದರು ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವೇ ಇಲ್ಲ. ಗಾಂಧೀಜಿಯ ಮನೆಗೊಂದು ದಿನ ಒಬ್ಬ ಭಿಕ್ಷು ಕನು ಬಂದನು. ಕಾಲಲ್ಲಿ ಹುಣ್ಣಾಗಿತ್ತು. ಹರಕು ವೇಷದ ಭಿಕಾರಿಯನ್ನು ಕಂಡು ಗಾಂಧೀಜಿಗೆ ತುಂಬಾ ಕನಿಕರವುಂಟಾಯಿತು. ಅವನನ್ನು ಆದರ ದಿಂದ ಕಂಡು ಆತನ ಹುಣ್ಣಿಗೆ ಮದ್ದು ಹಚ್ಚಿ ಒಟ್ಟೆ ಸುತ್ತಿದರು. ಬಡವ ನನ್ನು ಉಪಚರಿಸುವುದು ತನ್ನ ಪಾಲಿನ ಕರ್ತವ್ಯವೆಂದು ತಿಳಕೊಂಡರು."

"ಭಿಕ್ಷೆ ಬೇಡಲು ಬಂದರೆ 'ಭಿಕ್ಷೆ ಇಲ್ಲ ನಡೆ' ಎಂದು ಹೇಳುವ ಮಂದಿಯೇ ಹೆಚ್ಚಲ್ಲವೇ? ಬಂದ ಭಿಕ್ಷುಕನನ್ನು ನೆಂಟರ ಹಾಗೆ ಉಪಚರಿ ಸುವ ನಮ್ಮಜ್ಜನ ಕತೆ ಸ್ವಭಾವ ಎಲ್ಲವೂ ವಿಚಿತ್ರವಲ್ಲವೇನಣ್ಣಾ!"

"ತಮ್ಮಾ! ನಿನಗೆಲ್ಲವೂ ವಿಚಿತ್ರವಾಗಿ ಕಾಣಲೇ ಬೇಕು. ಗಾಂಧೀಜಿಗೆ ಹುಚ್ಚಲ್ಲವೇ? ಎಂದು ಹೇಳುವವರೂ ಈ ಲೋಕದಲ್ಲಿ ಇರಬಹುದು! ಪ್ರಪಂಚದಲ್ಲಿ ಅನುಭವಗೊಳ್ಳಲಿಚ್ಛಿಸುವ ವ್ಯಕ್ತಿ ಗಾಂಧೀಜಿಯ ಜೀವನ ಚರಿತ್ರೆಯನ್ನು ತಿಳಿದು ಅಚ್ಚರಿಗೊಂಡು ಅವರಂತೆಯೇ ಒಳ್ಳೆಯ ಮಾರ್ಗ ವನ್ನು ಕಂಡು ಹಿಡಿಯುವುದಕ್ಕೆ ಯತ್ನಿಸದಿರಲಾರನು. ಗಾಂಧೀಜಿಗೆ ಅಂದಿ

ನಿಂದ ಅನಾರೋಗ್ಯದಲ್ಲಿರುವ ಮಂದಿಯ ಶುಶ್ರೂಷೆ ಮಾಡಬೇಕೆಂದು ಕಂಡಿತು."

"ಅಣ್ಣಾ! ಆಸ್ಪತ್ರೆಯಾದರೆ ಸರಿ. ಗಾಂಧಿ ಅಜ್ಜನಿಗೆ ಇಷ್ಟೆಲ್ಲಾ ಮಾಡಿಕೊಂಡು ಈ ಕೆಲಸಕ್ಕೂ ತೊಡಗುವುದು ತುಂಬಾ ಕಷ್ಟವಾಗ ಲಿಲ್ಲವೇ?"

"ತಮಗೆ ಕಷ್ಟವಾಗುವುದೆಂದು ಜನರ ಸೇವೆ ಮಾಡುವುದಕ್ಕೆ ಹಿಂದು ಳಿದ ವ್ಯಕ್ತಿ ಗಾಂಧೀಜಿಯಲ್ಲ. ದಿನನಿತ್ಯ ಒಂದೆರಡು ಗಂಟೆಯ ತನಕ ವಾದರೂ ಶುಶ್ರೂಷೆ ಮಾಡುವುದು ತನ್ನ ಪಾಲಿನ ಕರ್ತವ್ಯವೆಂದು ತಿಳ ಕೊಂಡಿದ್ದರು. ಅಲ್ಲಿರುವ ಭಾರತೀಯರು ಮನೆಯ ಸುತ್ತಮುತ್ತಲೂ ಕೊಳಕನ್ನಿರಿಸಿಕೊಳ್ಳುತ್ತಿದ್ದರು. ಇದರಿಂದಲಾಗಿ ಭಾರತೀಯರೆಂದರೆ ಹೇಸಿ ಗೆಯ ಮನುಷ್ಯರೆಂಬ ಭಾವನೆ ಅಲ್ಲಿನವರಲ್ಲುಂಟಾಗಿತ್ತು. ಸುತ್ತಲೂ ನಿರ್ಮಲವಾಗಿರಿಸಿ ನಾಗರಿಕರಂತೆ ಬಾಳ ಕಲ್ಪಿಸುವುದೂ ತನ್ನ ಕರ್ತವ್ಯವೆಂದು ತನ್ನ ದೇಶಕ್ಕಾಗಿ ಸೇವೆ ಸಲ್ಲಿಸಬೇಕೆಂಬುದು ಗಾಂಧೀಜಿಯ ಅಭಿಪ್ರಾಯ ವಾಗಿತ್ತು. ಅದಕ್ಕಾಗಿಯೇ ನೈರ್ಮಲ್ಯದ ಕುರಿತು ತುಂಬಾ ಬೋಧಿಸಿದರು. ತಾವೇ ಹಿಡಿಸೂಡಿ ತೆಗೆದು ಓಣಿಗೆ ಸಾಗಿದರು. ಆದರೂ ನಮ್ಮ ಜನತೆ ಅಷ್ಟು ಮುಂದೆ ಬರಲಿಲ್ಲ. ಕಾಲಕ್ರಮೇಣ ಸುಧಾರಿಸಿಕೊಂಡೀತೆಂದು ಗಾಂಧೀಜಿಯೇ ಹೇಳುತ್ತಿದ್ದರು."

"ಅಣ್ಣಾ! ತಿಂಡಿ ತಿಂದಷ್ಟು ಚಿಣ್ಣರಿಗೆ ಎಷ್ಟು ಸಂತೋಷವೋ ಅಷ್ಟೇ ಅದಕ್ಕಿಂತಲೂ ಹೆಚ್ಚು ಸಂತೋಷ ಗಾಂಧಿ ಅಜ್ಜನಿಗೆ ಸೇವೆ ಮಾಡುವುದರಿಂದ ಉಂಟಾಗುತ್ತಿತ್ತು ಅಲ್ಲವೇ?"

"ಬಹು ಒಳ್ಳೆಯ ಉದಾಹರಣೆ ಕೊಡುತ್ತಿರುವೆಯಲ್ಲಾ ತಮ್ಮಾ! ತಿಂಡಿ ತಿನ್ನುವುದು ಮಕ್ಕಳಿಗೆ ಹೆಚ್ಚಿನ ಸಂತೋಷವೇನೋ ಹೌದು. ಆದರೆ ಹೆಚ್ಚು ತಿಂಡಿ ತಿಂದರೆ ಹೊಟ್ಟೆ ಉಬ್ಬರಿಸಿ ಹೋದೀತು; ಅನಾರೋಗ್ಯ ಉಂಟಾ ದೀತು. ಗಾಂಧಿ ಅಜ್ಜನಿಗೆ ಹಾಗೇನೂ ಆಗಲಿಲ್ಲ."

"ಹಾಗಲ್ಲಣ್ಣಾ! ಅಷ್ಟು ಆನಂದ ಎಂದೆನಷ್ಟೆ. ತಮ್ಮ ಅಂದುದಕ್ಕೆಲ್ಲಾ ನೀವು ಹೀಗೆ ಕುಚೋದ್ಯ ಮಾಡಿದರೆ ಹೇಗೆ?"

"ಆದರೆ ಸರಿ; ನೀನೆಂದುದಕ್ಕೆಲ್ಲಾ ಹೂಂ ಹೂಂ ಎಂದು ಬಸವಣ್ಣನಂತೆ ತಲೆ ಅಲ್ಲಾಡಿಸುತ್ತೇನೆ. ನಿನಗೆ ತೃಪ್ತಿ ತಾನೇ?"

"ಬೇಡ, ನಿಮಗೆ ಹೇಗೆ ಇಷ್ಟವೋ ಹಾಗೆಯೇ ಆಗಲಿ."

"ನಿನ್ನಿಷ್ಟವೇ ಆಗಲಿ. ಗಾಂಧೀಜಿಗೆ ಸತ್ಯವನ್ನು ಅರಸುವುದೆಂದರೆ ಬಹಳ ಇಷ್ಟವೆಂದು ಹೇಳಿದೆನಲ್ಲಾ. ಈ ರೀತಿಯ ಸೇವೆಯಿಂದ ಅವರು ಸತ್ಯವನ್ನರಸುತ್ತಿದ್ದರು; ಸೌಂದರ್ಯ ಕಾಣುತ್ತಿದ್ದರು; ನಿಜವಾಗಿಯೂ ಉಲ್ಲಾಸಗೊಳ್ಳುತ್ತಿದ್ದರು; ಅಲ್ಲಿರುವಾಗಲೇ 'ಬೋಅರ್' ಯುದ್ಧ ಪ್ರಾರಂಭವಾಯಿತು. ಈ ಯುದ್ಧದಲ್ಲಿ ತಾನು ಸಹಾಯಕನಾಗಬೇಕು; ಜನರ ಕಷ್ಟ ನಿವಾರಣೆ ಮಾಡಬೇಕು; ಎಂದು ಬಗೆದರು."

"ಏನು? ಯುದ್ಧ! ಗಾಂಧಿ ಅಜ್ಜ ಯುದ್ಧ ಮಾಡಿದರೇ? ಗಾಂಧಿ ಅಜ್ಜ ಸಿಪಾಯಿಗಳಾದರೇ?"

"ತಮ್ಮಣ್ಣಾ! ನಿನ್ನ ಕುತೂಹಲಕ್ಕೆ ತುದಿ ಮೊದಲಿಲ್ಲ. ಸಿಪಾಯಿಯೇನೂ ಆಗಲಿಲ್ಲ. ಗುಂಡು ಹಾರಿಸಲಿಲ್ಲ. ಕೋವಿ ಎತ್ತಲಿಲ್ಲ. ಕತ್ತಿ ಬೀಸಲಿಲ್ಲ. ಗದೆ ಹಾರಿಸಲಿಲ್ಲ. ಅವರು ಸೇವೆಯನ್ನು ಬಯಸಿದರು."

"ಅಣ್ಣಾ! ಬಾರಿಬಾರಿಗೂ ಸೇವೆ ಸೇವೆ ಎನ್ನುತ್ತೀರಲ್ಲಾ! ಎಂಥಾ ಸೇವೆ ಅದು, ಹರಿಸೇವೆಯೇ?"

"ಹರಿ ಸೇವೆಯೂ ಅಲ್ಲ, ತೊಗರಿ ತೋವೆಯೂ ಅಲ್ಲ! ನಿನಗೆ ಸೇವೆ ಕೇಳಿ ಕೇಳಿ ಸಾಕಾಯಿತೇ? ಆದರೆ ಕತೆಯನ್ನೇ ನಿಲ್ಲಿಸಿ ಬಿಡುತ್ತೇನೆ."

"ಬಹಳ ಬುದ್ಧಿವಂತ ನನ್ನಣ್ಣ. ತೊಡಗಿದ ಕೆಲಸವನ್ನು ಅರ್ಧದಲ್ಲಿ ಬಿಡುವುದು ಯಾರ ಲಕ್ಷಣವಣ್ಣಾ!"

"ಓಹೋ! ಅಣ್ಣನಿಗೆ ಬುದ್ಧಿ ಹೇಳ ಹೊರಟ ಜಾಣ ನೀನು ಅಲ್ಲವೇ? ನೀನು ಹೇಳಿದ್ದನ್ನು ಕೇಳುವುದು ಬಿಟ್ಟು ಅದೋ? ಇದೋ? ಹಾಗೋ? ಹೀಗೋ? ಹೇಗ? ಎಂದೆಲ್ಲಾ ಪ್ರಶ್ನೆ ಹಾಕಿದರೆ ಮತ್ತೆ ನಾನೇನು ಮಾಡಲಿ?"

"ಆದರಣ್ಣಾ! ನಾನು ಉಸಿರೆತ್ತುವುದಿಲ್ಲ. ಕಲ್ಲಿನ ಮೂರ್ತಿ ಹಾಗೆ ಕುಳಿತುಕೊಳ್ಳುತ್ತೇನೆ. ಅಣ್ಣನಿಗೆ ಸಂತೋಷ ತಾನೆ?"

"ಸಂತೋಷವೆಂದು ಯಾರು ಹೇಳಿದರು. ಬೇಡ ಎಂದೇ ಹೇಳುತ್ತೇನೆ. ನನ್ನ ತಮ್ಮ ಕಲ್ಲಮೂರ್ತಿಯಾಗಿ ಗೋಮಟನೇ ಆದರೆ ನಾನೇನು ಮಾಡಲಿ? ಮತ್ತೆ ಯಾರೊಡನೆ ಮಾತನಾಡಲಿ?"

"ಹಾಗಿದ್ದರೆ ಮುಂದಿನ ಕತೆ ಹೇಳಿರಿ. ಸೇವೆ ಮಾಡಿದರಂತೆ; ಯುದ್ಧ ಪ್ರಾರಂಭವಾಯಿತು; ಗುಂಡು ಹಾರಿತು; ಇತ್ಯಾದಿಯೆಲ್ಲವೂ ಆಯಿತಣ್ಣಾ! ಗಾಂಧಿ ಅಜ್ಜ ಯುದ್ಧ ಬೇಡ ಬೇಡ ಎಂದರೇ?"

"ಈ ಬಾರಿ ಗಾಂಧೀಜಿ 'ಅಹಿಂಸೆ'ಯನ್ನು ಬೋಧಿಸ ಹೊರಡಲಿಲ್ಲ. ಯುದ್ಧದ ಸಹಾಯಾರ್ಥ ಜನರ ಕಷ್ಟವನ್ನು ದೂರೀಕರಿಸುವುದಕ್ಕೋಸ್ಕರ ಗಾಯಗೊಂಡ ಜನರ ಶುಶ್ರೂಷೆ ಮಾಡುವುದಕ್ಕೆ ತಾವು ಮುಂದೆ ಬರುವು ದಾಗಿ ಬಗೆದು ಸರಕಾರಕ್ಕೆ ವಿನಂತಿಸಿಕೊಂಡರು."

"ಅಣ್ಣಾ! ಗಾಂಧೀಜಿಗೆ ಡಾಕ್ಟರರಾಗಬೇಕೆಂಬ ಆಸೆಯಿತ್ತಲ್ಲವೇ? 'ಹೆಣ ಕೊಯ್ಯುವ ಕೆಲಸ ಕುಲಧರ್ಮಕ್ಕೆ ವಿರೋಧ' ಎಂದು ಆ ಆಸೆ ಈಡೇರಲಿಲ್ಲ. ಆದರೂ ಬ್ರಹ್ಮ ಗಾಂಧಿ ಅಜ್ಜನ ತಲೆಯಲ್ಲಿ ಅಸ್ವಸ್ಥದಲ್ಲಿರು ವವರ ಸೇವೆ ಮಾಡೆಂದು ಒನೆಕೆಯಲ್ಲೇ ಬರೆದ ಹಾಗೆ ಕಾಣುತ್ತದಲ್ಲಾ!"

"ತಮ್ಮಾ! ಬಹಳ ಚುರುಕಾಗಿರುವೆಯಲ್ಲಾ! ಒಳಿತಿಗಾಗಿ ದುಡಿಯ ಬೇಕೆಂಬುವ ಗಾಂಧಿ ಅಜ್ಜನ ಆಶೆ ಆಕಾಂಕ್ಷೆಗಳ ಕಲ್ಪನೆಯಾದರೂ ಯಾರಿ ಗಾಗಬಹುದು. ಅಂತೂ ವಿಧಿಯ ಲೀಲೆ ಎಂದು ನಾವು ವೇದಾಂತ ಹೇಳ ಬಹುದು? ನಮಗೆಲ್ಲಾ ನಡೆಯುವ ಬುದ್ಧಿಯಿದ್ದರೆ ಆದರ್ಶಮಾರ್ಗವನ್ನು ತೋರಿಸಿ ಕೊಟ್ಟ ಆದರ್ಶವ್ಯಕ್ತಿಯೆಂದು ಎಷ್ಟು ಬಾರಿ ಹೇಳಿದರೂ ಹೆಚ್ಚಾಗ ದೆಂದು ನನಗೆ ತೋರುತ್ತದೆ."

"ಜಾತಿ ಜಾತಿಗಳಲ್ಲಿ ಉತ್ಕೃಷ್ಟವಾದುದು ಯಾವುದೋ ಅದು ರತ್ನ ದಂತೆ. ಆದರೆ ಆದರ್ಶ ವ್ಯಕ್ತಿಗಳಲ್ಲಿ ಉತ್ಕೃಷ್ಟರಾದವರನ್ನು ಆದರ್ಶರತ್ನ ಎಂದು ಕರೆಯಬಹುದಲ್ಲವೇ?"

"ತಮ್ಮಾ! ಆ ವ್ಯಾಕರಣದ ಸುದ್ದಿ ಬಿಟ್ಟುಬಿಡು. ವ್ಯಾಕರಣ ಕಲಿತು ಗೋಕರ್ಣಕ್ಕೆ ಹೋಗಿ ಬಂದ ಹಾಗೆ."

"ವ್ಯಾಕರಣ ಕಲಿತು ಗೋಕರ್ಣಕ್ಕೆ ಹೋಗುವುದು ಯಾಕಣ್ಣಾ!"

"ವ್ಯಾಕರಣ ಕಲಿತರೆ ಶಬ್ದ ಸಿದ್ಧಿಯಾಗುತ್ತದೆ. ಮೋಕ್ಷ ಸಿಕ್ಕುತ್ತದೆ ಎಂದು ವ್ಯಾಕರಣ ಪಂಡಿತರು ಹೇಳುತ್ತಾರೆ. ಅಷ್ಟು ಸಾಲದ್ದಕ್ಕೆ ಗೋಕರ್ಣ ಪುಣ್ಯಕ್ಷೇತ್ರಕ್ಕೆ ಹೋದ ಹಾಗೆ—ಉಚ್ಚ ಮೋಕ್ಷವೇ ಸಿಕ್ಕೀತು ಎಂದು ನಗೆಗಾಗಿ ಹೇಳುತ್ತಾರೆ ಅಷ್ಟೆ!"

"ಹೂಂ—ಅಣ್ಣಾ, ಕತೆ ಎಲ್ಲೋ ಬಿಟ್ಟು ಹೋಯಿತಲ್ಲಾ!"

"ಬಿಟ್ಟು ಹೋದರೆ ಹಿಡಿದು ತಂದರಾಯಿತು. ಗಾಂಧಿ ಅಜ್ಜನ ಮನವಿಗೆ ಮೊದಲು ಸರಕಾರ ಒಪ್ಪಲಿಲ್ಲ. ಗಾಂಧಿ ಅಜ್ಜ ಹಟ ಬಿಡಲಿಲ್ಲ. ಯುದ್ಧವೂ ಜೋರಾಯಿತು. ಸೇವೆಗಾಗಿ ಗಾಂಧಿ ಅಜ್ಜನ ಪಂಗಡದವರನ್ನು ಸ್ವೀಕರಿಸಿ ಕೊಂಡಿತು. ಅವರ ಆ ದಳದಲ್ಲಿ ಅಂದು ೧೧೦೦ ಮಂದಿ ಸ್ವಯಂಸೇವಕ ರಿದ್ದರು. ಯುದ್ಧರಂಗದಿಂದ ಈ ಸ್ವಯಂಸೇವಕರು ದಿನಕ್ಕೆ ಹತ್ತಿಪ್ಪತ್ತು ಮಂದಿಗಳನ್ನು ಡೋಲಿಯಲ್ಲಿ ಹೊತ್ತುಕೊಂಡು ಬಂದು ಚಿಕಿತ್ಸೆ ಶುಶ್ರೂಷೆ ಗಳನ್ನು ಮಾಡುತ್ತಿದ್ದರು."

"ಮಹಾ ಸಾಹಸವನ್ನೇ ಮಾಡಿಬಿಟ್ಟರಲ್ಲಾ! ಅಣ್ಣಾ! ಅಸೌಖ್ಯದಲ್ಲಿರುವ ತಂದೆತಾಯಂದಿರ ಶುಶ್ರೂಷೆ ಮಾಡದೇ ಇಂದಿನ ಮಕ್ಕಳು ಹಿಂದೆ ಬರುತ್ತಾ ರೆಂದು ನಮ್ಮ ಮಾಸ್ಟರು ಹೇಳುತ್ತಿದ್ದರಣ್ಣಾ!"

"ಸತ್ಯ, ಗಾಂಧೀಜಿ ಹುಟ್ಟಿದ ನಾಡಿನ ಮಕ್ಕಳಾದ ನಾವು ಗಾಂಧೀಜಿಯ ಆದರ್ಶಗುಣಗಳನ್ನು ತಿಳಿದು ನಮ್ಮ ತಪ್ಪುಗಳನ್ನು ತಿದ್ದಿ ಜೀವನ ಸಾರ್ಥಕ ಗೊಳಿಸಬೇಕು. ಜಗತ್ತಿಗೆ ಉತ್ತಮ ತತ್ವಗಳನ್ನು ತಿಳಿಸಲಾಗಿಯೇ ಇಂಥಾ ಉತ್ತಮರ ಜನನವಾಗುತ್ತದೆ."

"ಸರಕಾರದವರಿಗೆ ಗಾಂಧಿ ಅಜ್ಜನ ಈ ಸಾಹಸ ಕಂಡು ಆಶ್ಚರ್ಯ ವಾಗಲಿಲ್ಲವೇ?"

"ಆಶ್ಚರ್ಯವಾಗದೆ ಇದ್ದೀತೇ? ಆ ಬಗ್ಗೆ ಬಹುವಾಗಿ ಹೊಗಳಿದರು. ಭಾರತೀಯರಿಗೆ ಇದರಿಂದಲಾಗಿ ಮನ್ನಣೆಯೂ ಅಧಿಕವಾಯಿತು. ತನ್ನನ್ನು ಇನ್ನೊಬ್ಬನಿಗೆ ಮಾರಿ ಆತನನ್ನು ಪಡಕೊಳ್ಳಬೇಕು ಎನ್ನುತ್ತಾರಲ್ಲವೇ? ಭಾರತೀಯರ ಧೈರ್ಯಸಾಹಸಗಳಿಗೆ ಅವರು ತುಂಬಾ ಮೆಚ್ಚಿದರು. ಆಸರುಬೇಸರ ಎಲ್ಲವನ್ನೂ ತಾಳಿ ಮಾಡುವ ಈ ಸೇವೆ ಸಾಮಾನ್ಯ

ವಾದುದೇನು? ಆದರಿಂದಲಾಗಿ ಭಾರತೀಯರನ್ನು ಸಾಮ್ರಾಜ್ಯದ ಸತ್ಪುತ್ರರೆಂದು ಕರೆಯತೊಡಗಿದರು. ದಳದ ಕಾರ್ಯ ಬಹು ಪ್ರಶಂಸೆಗಳಿಸಿತು. ದಳದ ನಾಯಕರಿಗೆ ಯುದ್ಧದ ಬಿರುದಿನ ಪದಕಗಳೂ ಬಹುಮಾನವಾಗಿ ಸಿಕ್ಕಿದವು."

"ಗಾಂಧಿ ಅಜ್ಜನಿಗೆ ಸ್ವರ್ಣಪದಕ ಬಹುಮಾನ ಸಿಕ್ಕಿತೇನಣ್ಣಾ!"

"ಹೌದು, ಸ್ವರ್ಣಪದಕ ಬಹುಮಾನ ಸಿಕ್ಕಿತು. ಗಾಂಧಿ ಅಜ್ಜ ಮಾಡಿದ ಕೆಲಸವೆಲ್ಲವೂ ಹಾಗೆಯೇ?"

"ಅಣ್ಣಾ! ಆಗ ನಾನಲ್ಲಿರುತ್ತಿದ್ದರೆ ಖಂಡಿತ ಗಾಂಧಿ ಅಜ್ಜನೊಂದಿಗೆ ಸೇರಿ ಒಂದು ಬಹುಮಾನ ಪಡೆಯುತ್ತಿದ್ದೆ"

"ಆದರೆ ಪದಕ ಪಡೆಯುವ ಆಸೆ ನಿನಗಿಲ್ಲವೇ? ದೇಶದ ಹಿತವನ್ನು ಸಾಧಿಸು. ಸದ್ಗುಣಗಳನ್ನು ಕಲಿತು ಭಾರತಾಂಬೆಯ ಸತ್ಪುತ್ರನೆನಿಸು. ಮಹಾಕಾರ್ಯಗಳನ್ನು ಸಾಧಿಸು. ಅದಕ್ಕಿಂತಲೂ ಹೆಚ್ಚಿನ ದೊಡ್ಡ ಪದಕ ದೊರೆಯಬಹುದು."

"ಆಗಲಣ್ಣಾ! ನಿನ್ನ ಆಶೀರ್ವಾದ ಬಲದಿಂದಲಾದರೂ ಹಾಗೆಯೇ ಆಗಲಿ."

"ತಮ್ಮಾ! ಗಾಂಧಿ ಅಜ್ಜ ಮಹಾಸಾಮರ್ಥ್ಯಶಾಲಿ ಎಂಬುದು ಜನತೆಗೆ ಇಷ್ಟರಲ್ಲೇ ತಿಳಿದುಹೋಯಿತು. ಗಾಂಧಿ ಅಜ್ಜನಂಥಾ ಒಬ್ಬ ವ್ಯಕ್ತಿಯ ಸಹಕಾರ ತಮಗೆ ದೊರೆತುದು ದೈವ ಕಟ್ಟಿಕೊಟ್ಟ ಭಾಗ್ಯವೆಂದು ಅವರು ತಿಳಕೊಂಡರು. ಗಾಂಧಿ ಅಜ್ಜ ಒಮ್ಮೆ ಕೂಗಿ ಕರೆದರೆ ಒಂದು ಸಾವಿರ ಮಂದಿ ಪ್ರತಿಧ್ವನಿ ಕೊಡುವ ಹಾಗಾಯಿತು. ಅವರ ಹೆಜ್ಜೆಯ ಹಿಂದೆ ಹೆಜ್ಜೆಯಿರಿಸಿ ತಾನು ಮುಂದೆ ತಾನು ಮುಂದೆ ಎಂಬಂತೆ ಜನರು ಹಿಂಬಾಲಿಸತೊಡಗಿದರು."

"ಅಣ್ಣಾ! ನಿಜವಾಗಿಯೂ ಅವರೇ ಭಾಗ್ಯಶಾಲಿಗಳು. ಒಬ್ಬ ಇಂಥಾ ಹಿರಿಯನ ಒಡನಾಟ ಪಡೆಯಬೇಕಿದ್ದರೂ ನಿಜವಾಗಿ ಭಾಗ್ಯಬೇಕು."

"ಬಹುಮುಖವಾಗಿ ಗಾಂಧಿ ಅಜ್ಜ ದಕ್ಷಿಣ ಆಫ್ರಿಕದಲ್ಲಿ ದುಡಿಯುತ್ತಿದ್ದಂತೆ ತಾನು ಭಾರತದಲ್ಲೂ ದುಡಿಯಬೇಕಾಗಿದೆ ಎಂಬ ಯೋಚನೆ ಅವರಲ್ಲುಂಟಾಯಿತು."

"ಅದಕ್ಕೆ ಅಲ್ಲಿನ ಮಂದಿ ಒಪ್ಪಿದರೇ? ಗಾಂಧಿ ಅಜ್ಜ ನಮ್ಮನ್ನು ಬಿಟ್ಟು ಹೋಗಬಾರದೆಂದು ಅವರು ಬೇಡಿಕೊಳ್ಳಲಿಲ್ಲವೇ?"

"ಇಂಥಾ ಒಬ್ಬ ಮಹನೀಯರು ಬಿಟ್ಟು ಹೋಗುವಾಗ ದುಃಖವಾಗದೆ ಇದ್ದೀತೇ? ಆದರೆ ವಿಧಿನಿಯಮದಂತೆ ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮಾಡಬೇಕು ತಾನೆ!"

"ಅಣ್ಣಾ! ನಿಜವಾಗಿಯೂ ಸಾಹಸಪೂರ್ಣವಾದ ಕತೆ—ನಮ್ಮ ಗಾಂಧಿ ಅಜ್ಜನ ಕತೆ."

---

— ೭ —

"ತಮ್ಮಾ! ಅಜ್ಜನಿಗೂ ಅಜ್ಜಿಗೂ ಜಗಳವಾಯಿತು."

"ಜಗಳ ಆಯಿತೇನಣ್ಣಾ!"

"ಹೂಂ. ಜಗಳವೇ ಆಯಿತು."

"ಯಾರು ಗೆದ್ದರು?"

"ಯಾರು ಗೆಲ್ಲಬಹುದು?"

"ಇಬ್ಬರಲ್ಲಿ ಒಬ್ಬರು."

"ತಮ್ಮಾ! ಸುಲಭದಲ್ಲಿ ಹೀಗೆಲ್ಲಾ ಸೋಲಿಸಬಾರದು"

"ಅಣ್ಣಾ! ನೀವು ಸರಿಯಾಗಿ ತಮ್ಮನಿಗೆ ಹೇಳುವುದು ಬಿಟ್ಟು ಅಂಕುಡೊಂಕು ಪ್ರಶ್ನೆಗಳನ್ನು ಕೇಳುವುದೇಕೆ?"

"ಆಗಲಿ, ನಾನೇ ಸೋತೆ, ನೀನು ಬಲು ಬುದ್ಧಿವಂತನಲ್ಲವೇ?"

"ಬುದ್ಧಿವಂತನ ಅಣ್ಣ ಮಹಾಬುದ್ಧಿವಂತನಲ್ಲವೇ?"

"ಆಯಿತು, ಬುದ್ಧಿವಂತನೇ! ಕೇಳು, ದಕ್ಷಿಣ ಆಫ್ರಿಕದಿಂದ ಭಾರತಕ್ಕೆ ಬಂದು ಇರಬೇಕೆಂದು ಗಾಂಧೀಜಿಗೆ ಪದೇ ಪದೇ ಮಿತ್ರರ ಕರೆ ಬರುತ್ತಿತ್ತು. ಆದ್ದರಿಂದ ಅಲ್ಲಿನ ಮಂದಿಯೊಡನೆ ಬಿಟ್ಟುಹೋಗುವುದಕ್ಕೆ ಅಪ್ಪಣೆ ಕೊಡಬೇಕೆಂದು ಕೇಳಿಕೊಂಡರು. ಜನರ ಪ್ರೀತಿಗೆ ಕಟ್ಟು ಬಿದ್ದ

ಗಾಂಧೀಜಿಗೆ ಅಲ್ಲಿಂದ ಹೊರಡುವುದು ಬಹು ಕಷ್ಟವೇ ಆಯಿತು. ಹಾಗೇನಾದರೂ ಸಹಾಯ ಅಪೇಕ್ಷಿಸುವಲ್ಲಿ ಅಗತ್ಯ ಬಿದ್ದಲ್ಲಿ ಒಂದು ವರ್ಷದೊಳಗೆ ಹಿಂತಿರುಗಿ ಬರಬೇಕೆಂಬ ಕರಾರಿನ ಮೇಲೆ ಗಾಂಧೀಜಿಗೆ ಹೋಗಲು ಅನುಮತಿ ಕೊಟ್ಟರು."

"ಅಬ್ಬಾ! ಅವರಿಗೆ ಗಾಂಧಿ ಅಜ್ಜನಲ್ಲಿ ಎಷ್ಟು ಅಭಿಮಾನವೋ! ಅಣ್ಣಾ! ನಾನಾಗಿದ್ದರೆ ಗಾಂಧಿ ಅಜ್ಜ ನನ್ನ ಬಳಿಯಿಂದ ದೂರ ಹೋಗುವುದಾದರೆ ಅತ್ತು, ಅತ್ತು ಕಾಲಿಗಡ್ಡ ಬಿದ್ದು, ಹೋಗಬೇಡಿ ಎಂದು ಕೇಳಿಕೊಳ್ಳುತ್ತಿದ್ದೆ."

"ತಮ್ಮಾ! ಪ್ರೀತಿಯೆಂಬುದು ಯಾರಿಂದಲೂ ಅಜೇಯವಾದುದೇ. ನಾವು ಮಾಡುವ ಕೆಲಸವೆಲ್ಲಾ ಪ್ರೀತಿಯಿಂದ ಕೂಡಿದ್ದರೆ ಶ್ರದ್ಧಾಪೂರ್ವಕ ಸುಗಮವಾಗಿ ಸಾಗುವುದು. ಗಾಂಧೀಜಿ ಅಲ್ಲಿಂದ ಹೊರಡುವ ಹೊತ್ತಿಗೆ ಅವರನ್ನು ಪ್ರೇಮಾಮೃತದಿಂದ ಮಿಾಯಿಸಿದರೆನ್ನಬಹುದು. ಬೀಳ್ಕೊಡಲು ಅಲ್ಲಲ್ಲಿ ಸಭೆಗಳು ನೆರವೇರಿದವು. ಬಹು ಅಮೂಲ್ಯವಾದ ಉಡುಗೊರೆಯನ್ನೂ ಗಾಂಧೀಜಿಗಿತ್ತರು. ಚಿನ್ನ ಬೆಳ್ಳಿ ವಜ್ರ ಮೊದಲಾದ ವಸ್ತುಗಳ ಕಾಣಿಕೆ ಗಾಂಧಿ ಅಜ್ಜನಿಗೆ ಸಿಕ್ಕಿತು. ಹೀಗೆ ಬಹುಮಾನ ದೊರೆತವುಗಳಲ್ಲಿ ಸಾಮಾನ್ಯ ೮೦೦ ರೂಪಾಯಿ ಬೆಲೆ ಬಾಳುವ ಒಂದು ಚಿನ್ನದ ಹಾರವು ಕಸ್ತೂರಿಬಾ ಅವರಿಗೆ ಕೊಟ್ಟುದಾಗಿದ್ದಿತು."

"ಹೂಂ. ಅಣ್ಣಾ! ಅದು ತನಗೆ ತನಗೆ ಎಂದು ಜಗಳ ಮಾಡಿದರೇ?"

"ತಮ್ಮಾ! ಗಾಂಧಿ ಅಜ್ಜನ ಮನಸ್ಸು ವಿಚಿತ್ರವಾದದ್ದೆಂದು ನಿನಗೆ ಗೊತ್ತಿಲ್ಲವೇ? ಒಡವೆ ತನಗೆಬೇಕೆಂದು ಆಸೆಪಡುವ ಅಲ್ಪ ವ್ಯಕ್ತಿ ಅವರಲ್ಲ—ನಾನು ಸಾರ್ವಜನಿಕರಿಗಾಗಿ ಸೇವೆ ಮಾಡಿದ್ದೇನೆ. ಸೇವೆಯ ಪ್ರತಿಫಲವಾಗಿ ದೊರೆತ ಇವನ್ನು ತಾನು ಸ್ವೀಕರಿಸಬಹುದೇ? ಸ್ವೀಕರಿಸಿದಲ್ಲಿ ಜನರಿಗೆ ಬೇಸರವಾಗದೇ? ಎಂಬ ಚಿಂತೆ ಅವರಲ್ಲುಂಟಾಯಿತು. ಈ ಬಹುಮಾನ ಸಿಕ್ಕಿದ್ದರಿಂದಲಾಗಿ ಇವನ್ನೇನು ಮಾಡಲಿ?—ಎಂಬ ಚಿಂತೆಯಿಂದ ಗಾಂಧಿ ಅಜ್ಜನಿಗೆ ರಾತ್ರಿ ನಿದ್ದೆ ಬೀಳಲೇ ಇಲ್ಲವಂತೆ. ಸಾವಿರಾರು ರೂಪಾಯಿಗಳ ಬಹುಮಾನವನ್ನು ಬಿಡುವುದೂ ಇಟ್ಟುಕೊಳ್ಳುವುದೂ ಗಾಂಧೀಜಿಯ ಕೋಮಲ ಮನಸ್ಸಿಗೆ ಬಹು ಕಷ್ಟವಾಗಿ ಕಂಡಿತು."

"ಆದರೇನು ಮಾಡಿದರು?"

"ಸರ್ವ ತ್ಯಾಗಿಯಲ್ಲವೇ ನಮ್ಮಜ್ಜ! ಅದನ್ನು ಸಾರ್ವಜನಿಕರ ಸಲುವಾಗಿ ಕೊಡುವುದೆಂದು ಕೊನೆಯ ನಿರ್ಧಾರವನ್ನು ಮಾಡಿಯೇ ಮಾಡಿದರು. ಕಸ್ತೂರಿ ಬಾ ಅವರಿಗೆ ಇದು ಸಮಾಧಾನವಿರದೆಂದು ನಮ್ಮಜ್ಜನಿಗೆ ತಿಳಿದಿತ್ತು. ಮಕ್ಕಳು ಗಾಂಧಿ ಅಜ್ಜನ ಯೋಚನೆಗೆ ಒಪ್ಪಿದರು. ಅಜ್ಜಿಯನ್ನು ಒಪ್ಪಿಸುವುದು ಮಾತ್ರ ಕಷ್ಟವಾಯಿತು."

"ಅಣ್ಣಾ! ಅದಕ್ಕೆ ಅಜ್ಜಿಯ ಹತ್ತಿರ ಕೇಳುವುದೇನು? ಎಲ್ಲವನ್ನೂ ತೆಗೆದುಕೊಟ್ಟು ಬಿಟ್ಟರಾಯಿತಲ್ಲವೇ?"

"ಬಹಳ ಸುಲಭದ ಯೋಚನೆ ನಿನ್ನದು. ಹಾಗೆಲ್ಲಾ ಸುಲಭದಲ್ಲೇ ಮುಗಿಸಿ ಬಿಟ್ಟರೆ ಹೇಗಾದೀತು? ಅವರಿಬ್ಬರು ದಂಪತಿಗಳಲ್ಲವೇ? ಇಡೀ ಜೀವಮಾನದಲ್ಲಿ ಸುಖದುಃಖವೆರಡರಲ್ಲೂ ಸಮಭಾಗಿಗಳಾಗಿ ಜೀವನ ಮಾಡಬೇಕಲ್ಲವೇ? ಹಾಗಿರುವಾಗ ಒಬ್ಬನ ಇಚ್ಛೆಯಂತೆ ನಡೆದರೆ ಸಂಸಾರದಲ್ಲಿ ಬೇಸರ ತಲೆದೋರಬಹುದು. ಜೀವನ ವಿರಸವಾಗಿ ಕಾಣಬಹುದು. ಯೋಗ್ಯವಾದ ವಿಚಾರವನ್ನು ತಿಳಿಸಿ ಅವರನ್ನು ಒಪ್ಪಿಸಿ ಮುಂದಿನ ಕೆಲಸ ಮಾಡಬೇಕೆಂಬುದೇ ಅವರ ಆಸೆಯಾಗಿದ್ದಿತು."

"ಅಣ್ಣಾ! ಮಕ್ಕಳು ಬಹು ಸುಲಭದಲ್ಲೇ ಒಪ್ಪಿದರೇ?"

"ಹೌದು. ಇಂಥಾ ಒಡವೆಗಳು ತಮಗೆ ಬೇಕಾಗಿದ್ದರೆ ತಾವೇ ಮಾಡಿಸಿಕೊಳ್ಳಬಹುದು. ಇದನ್ನು ಆಗಲೇ ಹಿಂತಿರುಗಿಸಬೇಕು ಎಂದು ಅವರು ಹೇಳಿದರು. ಗಾಂಧಿ ಅಜ್ಜನ ಮಾತಿಗೆ ಒಪ್ಪದ ಕಸ್ತೂರಿ ಅಜ್ಜಿ— 'ನಿಮಗೆ ಆ ವಸ್ತುಗಳು ಬೇಡವಾಗಿರಬಹುದು. ಮಕ್ಕಳನ್ನು ಬೇಕಾದಂತೆ ಹೇಳಿ ನಿಮ್ಮ ಅಭಿಪ್ರಾಯಕ್ಕೆ ತಕ್ಕಂತೆ ಕುಣಿಸಿಕೊಳ್ಳುತ್ತಿದ್ದೀರಿ. ಮಕ್ಕಳಿಗೂ ಈ ಒಡವೆ ಬೇಡವಾಗಿರಬಹುದು. ನನಗೂ ಬೇಡ. ಮುಂದೆ ಸೊಸೆಯಂದಿರಿಗೆ ಬೇಕಾದೀತು. ನಾಳೆ ಹೇಗಿರುತ್ತೇವೋ? ಯಾರಿಗೆ ಗೊತ್ತು? ಆದ್ದರಿಂದ ಪ್ರೀತಿಯಿಂದ ಕೊಟ್ಟ ಈ ವಸ್ತುಗಳನ್ನು ನಾನು ಹಿಂದಿರುಗಿಸಲಾರೆ'— ಎಂದು ಹೇಳಿದರು. ಅದಕ್ಕೆ—'ನಾನು ಇದ್ದೇನಲ್ಲವೇ ನನ್ನನ್ನು ಕೇಳು; ಬೇಕಾದಾಗ ನಿನಗೆ ಮಾಡಿಸಿ ಕೊಡುತ್ತೇನೆ' ಎಂದರು. ಮಾಡಿಸಿ ಕೊಡುವವರನ್ನು ಕಂಡಿದ್ದೇನೆ. ನನ್ನ ಒಡವೆಗಳನ್ನೆಲ್ಲಾ

ಹಾಳು ಮಾಡಿರುವಿರಿ. ನಾನು ಹಿಂದಕ್ಕೆ ಕೊಡುವುದಿಲ್ಲ. ನೀವೇನು ಮಾಡುವಿರಿ?—ಎಂದು ಅವರು ಹಟ ಹಿಡಿದರು."

"ಈ ಒಡವೆಗಳೆಲ್ಲಾ ನಾನು ಮಾಡಿದ ಸೇವೆಗಾಗಿ ಸಿಕ್ಕಿದವುಗಳೇ? ಅಥವಾ ನಿನಗಾಗಿ ಸಿಕ್ಕಿದವುಗಳೇ?—ಎಂದು ಗಾಂಧಿ ಅಜ್ಜನ ಪ್ರಶ್ನೆಯಾಯಿತು."

"'ಅದೇನೋ ಇರಬಹುದು. ನೀವು ಮಾಡಿದ ಸೇವೆ ನಾನು ಮಾಡಿದ ಹಾಗೆಯೇ. ನಿಮ್ಮ ಸೇವೆಯ ಲೆಕ್ಕದಲ್ಲಿ ನಾನು ಹಗಲು ರಾತ್ರಿ ಕಷ್ಟ ಪಡುವುದಿಲ್ಲವೇ? ನನ್ನನ್ನು ಇಲ್ಲಿ ಬವಣೆಗೆ ಗುರಿ ಮಾಡಿಸಿ ಅವರಿವರ ಚಾಕರಿಯನ್ನು ನನ್ನಿಂದ ಮಾಡಿಸಲಿಲ್ಲವೇ? ಅದಕ್ಕೆಲ್ಲಾ ಲೆಕ್ಕವಿದೆಯೇ? ಈಗ ನನಗೆ ಅವುಗಳಲ್ಲಿ ಅಧಿಕಾರವಿಲ್ಲವೇ?' ಎಂದು ವಾದ ಹೂಡಿದರು ನಮ್ಮಜ್ಜಿ."

"ಅಣ್ಣಾ! ನಮ್ಮಜ್ಜಿ ಬಹು ಚುರುಕಾಗಿದ್ದಾರಲ್ಲವೇ? ಮತ್ತೇನಾಯಿತು?"

"ಆಗುವುದೇನು. ನಮ್ಮಜ್ಜಿ ಒಳ್ಳೆಯವರಲ್ಲವೇ! ಹೇಗೂ ಅವರನ್ನು ಸಮಾಧಾನಪಡಿಸಿ ಅಲ್ಲಿನ ಸಾರ್ವಜನಿಕರಿಗಾಗಿ ಅದನ್ನು ವಿನಿಯೋಗಿಸುವುದಕ್ಕಾಗಿ ಅದನ್ನು ಬೇಂಕಿನಲ್ಲಿ ಇರಿಸಿದರು. ಕಾಲಕ್ರಮೇಣ ಹಾಗೆ ಮಾಡಿದುದು ಒಳ್ಳೆಯದೇ ಆಯಿತೆಂದು ನಮ್ಮಜ್ಜಿಗೂ ಕಂಡಿತು. ಸೇವೆ ಮಾಡುವವರು ಬಹುಮಾನವನ್ನು ಸ್ವೀಕರಿಸಬಾರದೆಂಬುದು ನಮ್ಮಜ್ಜನ ಮತವಾಗಿತ್ತು."

"ಅಣ್ಣಾ! ಸರಿಸರಿ. ಆದ್ದರಿಂದಲೇ ನಮ್ಮ ದೇಶದ ಮಂತ್ರಿಗಳ ಮೇಲೆ ಇಂದು ಆರೋಪವಾಗುತ್ತಿದೆ, ಅಲ್ಲವೇ?"

"ನಿಜ. ದೇಶಪ್ರೇಮಿಯಾದವನು ಈ ಬಗೆಯ ಆಶೆಗಳನ್ನು ಬಿಟ್ಟಿರಬೇಕು. ಅದರ ವಿನಾ ಅವನ ಕಾರ್ಯ ಎಂದೂ ಶ್ರೇಯಸ್ಸನ್ನು ಸಾಧಿಸದು; ಸುಗಮವಾಗದು. ವಿಶ್ವಪ್ರೇಮಿಯಾದ ನಮ್ಮಜ್ಜನ ತತ್ವಗಳು ಸಾಮಾನ್ಯವಾದವುಗಳಲ್ಲ. ದಕ್ಷಿಣ ಆಫ್ರಿಕದಿಂದ ಹಿಂತಿರುಗಿದ ಗಾಂಧೀಜಿ ಕೆಲವು ಕಾಲ ಊರೂರು ಅಲೆದಾಡಿ ಅನುಭವ ಕಟ್ಟಿಕೊಂಡರು. ೧೯೦೧ನೇ

ಇಸವಿಯ ಕಾಂಗ್ರೆಸ್ ಮಹಾಸಭೆಯು ಆಗಲೇ ಜರಗುವುದೆಂದು ಗಾಂಧೀಜಿಗೆ ತಿಳಿದಿತ್ತು. ಅದರಲ್ಲಿ ತಾನೂ ಭಾಗವಹಿಸಬೇಕೆಂಬ ಉತ್ಕಟೇಚ್ಛೆ ಅವರಲ್ಲುಂಟಾಯಿತು."

"ಅಣ್ಣಾ! ಮಹಾಸಭೆಗೆ ಗಾಂಧೀಜಿ ಹೋಗಿ ಏನು ಮಾಡಿದರು? ಉದ್ದವಾದ ಭಾಷಣ ಕೊಟ್ಟರೇ?"

"ಗಾಂಧೀಜಿ ಮಹಾಸಭೆಗೆ ಭಾಷಣ ಕೊಡುವುದಕ್ಕಾಗಿ ಹೋಗ ಬಯಸಲಿಲ್ಲ. ಅನುಭವ ಪಡೆಯಬೇಕೆಂಬುದೇ ಅವರ ಇಚ್ಛೆ; ತನ್ನ ಪಾಲಿನ ಸೇವೆ ಸಲ್ಲಿಸಬೇಕೆಂಬುದೇ ಅವರ ಪಾಲಿನ ಮಹದಾಸೆ, ಅಲ್ಲಿ ಲೋಕ ಮಾನ್ಯರನ್ನು ಕಂಡರು. ಅಲ್ಲಿನ ಸ್ವಯಂಸೇವಕರ ರೀತಿ ನೀತಿ ಗಾಂಧೀಜಿಗೆ ಒಗ್ಗಲಿಲ್ಲ."

"ಅವರೇನು ಮಾಡುತ್ತಿದ್ದರು ಗಾಂಧೀಜಿಗೆ ತೊಂದರೆ ಕೊಟ್ಟರೇ?"

"ಗಾಂಧೀಜಿಗೆ ತೊಂದರೆ ಕೊಡುತ್ತಿದ್ದರೆ ಅವರು ಬೇಸರಗೊಳ್ಳುತ್ತಿರಲಿಲ್ಲ. ಅಲ್ಲಿನ ಸ್ವಯಂಸೇವಕರು ತಮ್ಮ ಕೆಲಸವನ್ನು ಸರಿಯಾಗಿ ಮಾಡುತ್ತಿರಲಿಲ್ಲ. ಒಂದು ಕೆಲಸಕ್ಕಾಗಿ ಒಬ್ಬನನ್ನು ಕರೆದರೆ ಆತನು ಇನ್ನೊಬ್ಬನನ್ನು ಕರೆಯುತ್ತಿದ್ದನು. 'ನಾಯಿಯೊಡನೆಂದರೆ ಅದು ಅದರ ಬಾಲದೊಡನೆ ಎನ್ನುತ್ತಿದೆ' ಎಂದು ನಮ್ಮ ಹಿರಿಯರು ಹೇಳುವ ಮಾತನ್ನು ನೀನು ಕೇಳಲಿಲ್ಲವೇ? ಅದೇ ರೀತಿ ಸ್ವಯಂಸೇವಕರು ಸೇವೆಗೆ ಹಿಂದೆ ನಿಲ್ಲುತ್ತಿದ್ದರು. ಇದನ್ನು ಕಂಡ ಗಾಂಧೀಜಿ ಅವರಿಗೆ ಸೇವೆಯ ಮರ್ಮವನ್ನು ತಿಳಿಸಿದರು. ಅಲ್ಲಲ್ಲಿ ಕೊಳೆ ಕಸಗಳು ತುಂಬಿಕೊಂಡಿದ್ದವು. ಇದನ್ನು ಏಕೆ ಶುಚಿಮಾಡುವುದಿಲ್ಲ? ಎಂದು ಕೇಳಿದರೆ ಸ್ವಯಂಸೇವಕರು ಅದು ಕಸಬರಿಕೆಯ ಕೆಲಸ ಎಂದು ಹೇಳುತ್ತಿದ್ದರಂತೆ."

"ಎಲ್ಲಿ ಹೋದರೂ ಗಾಂಧಿ ಅಜ್ಜನಿಗೆ ಬುದ್ಧಿ ಹೇಳುವ ಕೆಲಸ."

"ತಮ್ಮಾ! ಅವರು ಬುದ್ಧಿ ಹೇಳಿದ್ದು ಮಾತ್ರವಲ್ಲ. ಕಸಬರಿಕೆಯ ಕೆಲಸ ಎಂದಾಗ ನಮ್ಮಜ್ಜ ಬ್ಯಾರಿಸ್ಟರ್—ಕಸಬರಿಕೆ ಕೊಡಿರಿ; ತಾನು ಗುಡಿಸುತ್ತೇನೆ—ಎಂದು ಆ ಕೆಲಸಕ್ಕೂ ಮುಂದಾದರು."

"ಅಂತೂ ಒಳ್ಳೆಯದಕ್ಕಾಗಿ ದುಡಿಯುವುದು ಗಾಂಧಿ ಅಜ್ಜನಿಗೆ ಕಲ್ಲು ಸಕ್ಕರೆ ತಿಂದ ಹಾಗೆ."

"ಸತ್ಯ. ಈ ಮಹಾಸಭೆಯ ಹೊತ್ತಿಗೆ ತನ್ನಿಂದಾದ ಸೇವೆ ಸಲ್ಲಿಸಬೇಕೆಂದು ಜೊತೆ ಕಾರ್ಯದರ್ಶಿಗಳಾಗಿದ್ದ 'ಭೂಪೇನ್ ಬಾಬು'ವಿನ ಬಳಿಗೆ ಹೋಗಿ ತನಗೇನಾದರೂ ಕೆಲಸ ಕೊಡಿರೆಂದರು. ಅದಕ್ಕೆ—'ಘೋಷಲಾಲರ ಬಳಿಗೆ ಹೋಗು. ನನ್ನಲ್ಲೇನೂ ಕೆಲಸವಿಲ್ಲ; ಅವರು ಏನಾದರೂ ಕೆಲಸವನ್ನು ಕೊಡಬಹುದು'—ಎಂದು ಉತ್ತರ ಸಿಕ್ಕಿತು. ಘೋಷಲಾಲರ ಬಳಿಗೆ ಹೋದಾಗ ಅವರಿಗೆ ಗುಮಾಸ್ತನ ಕೆಲಸ ಬೇಕಾದರೆ ಕೊಡಬಹುದೆಂದರು. ಗಾಂಧೀಜಿಯ ಯೋಗ್ಯತೆ ಅವರಿಗೇನು ಗೊತ್ತು?"

"ಅಣ್ಣಾ! ನಮ್ಮಜ್ಜನಿಗೆ ಅದೇ ಬಹಳ ಸಂತೋಷವಾಗಿರಬಹುದು. ಅದು ಇದು ಎಂಬ ಭೇದವಿಲ್ಲದೆ ಯಾವ ಕೆಲಸಕ್ಕೂ ಅವರು ಸಿದ್ಧರು ತಾನೆ?"

"ಅವರ ತತ್ವವೇ ಹಾಗೆ. ಅಂತೂ ಗುಮಾಸ್ತರಾದರು. ಬಹು ಜಾಗ್ರತೆಯಿಂದ ಅವರ ಪಾಲಿಗೆ ಬಂದ ಪತ್ರಗಳ ರಾಶಿಗೆ ಬೇಗನೆ ಉತ್ತರವನ್ನು ಬರೆದು ಮುಗಿಸಿದರು. ಇದರಿಂದ ಘೋಷಲಾಲರಿಗೆ ವಿಸ್ಮಯವೇ ಉಂಟಾಯಿತು. ಆ ಬಳಿಕ ನಮ್ಮಜ್ಜನ ಸರಿಯಾದ ಪರಿಚಯ ಅವರಿಗೆ ದೊರೆಯಿತು. ಗಾಂಧೀಜಿಯ ಚರಿತ್ರೆ ತಿಳಿದಾಗ ತಾನು ಇಂಥಾ ಒಬ್ಬ ವ್ಯಕ್ತಿಗೆ ಗುಮಾಸ್ತನ ಕೆಲಸವಿತ್ತೆನಲ್ಲಾ ಎಂದು ನಾಚುಗೆಪಟ್ಟು ಬೇಸರಿಸಬಾರದೆಂದು ಕೇಳಿದರು. ಗಾಂಧೀಜಿ—"ಹಾಗೇನೂ ಇಲ್ಲ. ತಾವು ಹಿರಿಯರು. ನನಗೆ ಇದರಿಂದ ಅನುಭವ ಹೆಚ್ಚುತ್ತಿದೆ. ನನಗೆ ಉಪಕಾರವೇ ಮಾಡಿದ ಹಾಗಾಯಿತು"—ಎಂದರು. ಅವರಿಗೆ ತುಂಬಾ ಸಂತೋಷವಾಯಿತು. ಇಂದಿನ ತರುಣರು ಈ ರೀತಿ ವಿಚಾರಮಾಡುವುದಿಲ್ಲ ಎಂದು ಗಾಂಧೀಜಿಯ ಬಗ್ಗೆ ಅಭಿಮಾನವನ್ನೇ ತೋರಿದರು. ಅವರಲ್ಲಿ ತುಂಬಾ ಸಲುಗೆಯೇ ಉಂಟಾಯಿತು. ಗಾಂಧೀಜಿಗೆ ಹಿರಿಯರ ಮೇಲೆ ತುಂಬಾ ಅಭಿಮಾನವಿರುವುದರಿಂದ ಘೋಷಲಾಲರ ಅಂಗಿಯ ಗುಂಡಿಗಳನ್ನು ಹಾಕುವ ಕೆಲಸವನ್ನೂ ಅವರೇ ಸ್ವತಃ ಉತ್ಸಾಹದಿಂದ ಮಾಡುತ್ತಿದ್ದರು."

"ಅಣ್ಣಾ! ನನಗೆ ನಗು ಬರುತ್ತಿದೆ. ಗಾಂಧಿ ಅಜ್ಜನಿಗೆ ಸಣ್ಣ ಮಕ್ಕಳ ಹಾಗೆ. ಅಪ್ಪನ ಬಾಯಿಗೆ ವೀಳ್ಯ ಕೊಡುವುದೆಂದರೆ ಮಕ್ಕಳಿಗೆ ಇಷ್ಟವಲ್ಲವೇ? ಅದೇ ರೀತಿ ಅಂಗಿ ಗುಂಡಿ ಹಾಕುವುದೂ ನಮ್ಮಜ್ಜನಿಗೆ ಇಷ್ಟ."

"ತಮ್ಮಾ! ಆದರೆ ನೀನು ನನ್ನ ಅಂಗಿಯ ಗುಂಡಿಗಳನ್ನು ಹಾಕು ತ್ತೀಯಾ?"

"ಓ! ಅದಕ್ಕೇನು? ನಿನ್ನ ಅಂಗಿಯನ್ನೇ ಹಾಕಿಕೊಳ್ಳುತ್ತೇನೆ."

"ಏ! ಜಾಣ. ನನ್ನ ಅಂಗಿ ನಿನಗೆ ದೊಡ್ಡದಾಗಲಾರದೇ?"

"ನಾನು ದೊಡ್ಡವನಾಗುವುದಿಲ್ಲವೇ?"

"ಹಾಗಲ್ಲ. ದಿನನಿತ್ಯ ನನ್ನ ಅಂಗಿಗುಂಡಿ ಹಾಕುವಿಯಾ? ಎಂದು ಕೇಳಿದೆ."

"ಹಾಕಬಹುದು, ಆದರೆ ಅತ್ತಿಗೆ ಬಂದಲ್ಲಿ ಜಗಳ ಮಾಡಬಹು ದಲ್ಲವೇ?"

"ತಮ್ಮಾ! ನೀನು ಸಾಮಾನ್ಯ ಮೂರ್ತಿಯಲ್ಲ."

"ಹೌದು, ಅಣ್ಣನ ಹಾಗೆಯೇ?"

"ತಮ್ಮಾ! ಮಹಾಸಭೆಯು ಜರಗಿತು. ಅನೇಕ ಮಂದಿಯ ಪರಿ ಚಯವನ್ನು ಗಾಂಧಿ ಅಜ್ಜ ಮಾಡಿಕೊಂಡರು. ವಿಚಾರ ವಿನಿಮಯಕ್ಕೂ ಎಡೆಯುಂಟಾಯಿತು. ಮಹಾಸಭೆ ಕಳೆದ ತರುವಾಯವೂ ತಮ್ಮ ಕೆಲಸದ ನಿಮಿತ್ತ ಅಲ್ಲಿ ಒಂದು ತಿಂಗಳ ಕಾಲ ಇದ್ದರು. ಗಾಂಧೀಜಿಗೂ ಗೋಖಲೆ ಯವರಿಗೂ ಅಲ್ಲಿ ಕಂಡು ಮಾತನಾಡಿಕೊಳ್ಳುವುದಕ್ಕೆ ಒಳ್ಳೆಯ ಅನುಕೂಲ ಸಿಕ್ಕಿದ ಹಾಗಾಯಿತು; ಒಂದು ತಿಂಗಳ ಕಾಲ ಕಲಕತ್ತೆಯಲ್ಲಿದ್ದು ಅಲ್ಲಿಂದ ಕಾಶಿಗೆ ಪ್ರಯಾಣ ಬೆಳೆಸಿದರು."

"ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸುವ ಆಸೆ ಗಾಂಧಿ ಅಜ್ಜನಿಗಾ ಯಿತೇ?"

"ಹಾಗೂ ಎನ್ನಬಹುದು. ದೇವರಲ್ಲಿ ತುಂಬಾ ಭಕ್ತಿ ಅವರಿಗಿತ್ತ ಲ್ಲವೇ? ಗಾಂಧೀಜಿಗೆ ಹಿಂದುಸ್ಥಾನದಲ್ಲೆಲ್ಲಾ ರೈಲಿನಲ್ಲಿ ಮೂರನೆ ತರ ಗತಿಯ ಪ್ರಯಾಣ ಮಾಡಬೇಕೆಂಬ ಆಸೆಯಿದ್ದಿತು. ಮೊದಲು ಕಾಶಿಗೆ ಹೋಗಿ ಅಸ್ವಸ್ಥದಲ್ಲಿರುವ ಮಿಸೆಸ್ ಬೆಸೆಂಟರನ್ನು ಕಾಣಬೇಕೆಂಬುದೇ ಈ ಪ್ರಯಾಣಕ್ಕೆ ಪ್ರಧಾನ ಕಾರಣವಾಗಿತ್ತು."

"ಸರಿ, ಸರಿ, ಅಸೌಖ್ಯದಲ್ಲಿರುವವರ ಸೇವೆ ಮಾಡಬೇಕೆಂಬುದೇ ಗಾಂಧೀಜಿಯ ಹಂಬಲ ತಾನೆ"

"ತಮ್ಮಣ್ಣಾ! ಅದೇನೋ ಇರಬಹುದು; ಸದ್ಯಃ ಅವರನ್ನು ಕಂಡು ಮಣಿದು ಬರಬೇಕೆಂದು ಅವರ ಇಚ್ಛೆಯಾಗಿತ್ತು."

"ಅದಿರಲಿ; ಆದರೆ ಅವರಿಗೆ ಮೂರನೇ ತರಗತಿಯಲ್ಲಿ ಪ್ರಯಾಣ ಮಾಡಲು ಅಷ್ಟು ಆಸಕ್ತಿಯೇಕೆ?"

"ಜನರ ಕಷ್ಟ ತಿಳಿಯುವುದಕ್ಕಾಗಿಯೇ ಹಾಗೆ ಯೋಚಿಸಿದರು. ಗಾಂಧೀಜಿ ಈ ಅಭಿಪ್ರಾಯ ತಿಳಿಸಿದಾಗ ಗೋಖಲೆಯವರು ನಕ್ಕಿದ್ದರು. ಅವರನ್ನು ಕಾಶಿಗೆ ಕಳುಹಿ ಕೊಡಲಾಗಿ ರೈಲ್ವೆನಿಲ್ದಾಣಕ್ಕೆ ಗೋಖಲೆಯವರು ಹೋಗಿದ್ದರು. ನನ್ನನ್ನು ಕಳುಹಲು ಯಾರೂ ಬೇಕಾಗಿಲ್ಲವೆಂದು ಗಾಂಧೀಜಿ ಹೇಳಿದಾಗ ಗೋಖಲೆಯವರು ಕೊಟ್ಟ ಉತ್ತರ ಯಾವುದು ಗೊತ್ತೇ?"

"ಏನದು? ಅದು 'ನನ್ನ ಧರ್ಮ' ಎಂದರೇ?"

"ನನ್ನ ಧರ್ಮ ಎನ್ನಲಿಲ್ಲ – ಮೊದಲನೆಯ ತರಗತಿಯಲ್ಲಿ ಪ್ರಯಾಣ ಬೆಳೆಸುವವರಾಗಿದ್ದರೆ ನಾನು ಬರುತ್ತಿರಲಿಲ್ಲ. ಮೂರನೆ ತರಗತಿಯ ಪ್ರಯಾಣಿಕರಾದ್ದರಿಂದಲೇ ಅಗತ್ಯವಾಗಿ ಬರಬೇಕಾಗಿದೆ ಎಂದರು."

"ಬಹಳ ಸ್ವಾರಸ್ಯವಾದ ಉತ್ತರ."

"ಬಹಳ ತಿರುಳುಳ್ಳ ಮಾತು."

"ಮತ್ತೇನಾಯಿತು?"

"ಗಾಂಧೀಜಿ, ಕಾಶಿಗೆ ತಲುಪಿದರು. ಅಲ್ಲಿ ವಿಶ್ವನಾಥನ ದರ್ಶನ ಮಾಡಿದರು. ಅಲ್ಲಿ ನಡೆಯುತ್ತಿರುವ ಅನ್ಯಾಯವನ್ನು ನೋಡಿ ದುಃಖ ವಾಯಿತು."

"ವಿಶೇಷವೇನು?"

"ತಮ್ಮಾ! ದೇವಸ್ಥಾನದಲ್ಲೂ ವ್ಯಾಪಾರ ನಡೆಯುತ್ತಿರುವುದನ್ನು ನೋಡಿ ಅವರಿಗೆ ಮರುಕವುಂಟಾಯಿತು. ದೇವರ ಧ್ಯಾನ ಮಾಡಲು ಯೋಗ್ಯವಾದ ಸ್ಥಳಗಳಲ್ಲಿ ಮಿಠಾಯಿ ಉಂಡೆಗಳನ್ನು ಆಟದ ಸಾಮಾನು

ಗಳನ್ನೂ ಮಾರುತ್ತಿದ್ದರು. ಶುಚಿಯಾಗಿರಬೇಕಾದ ದೇವಸ್ಥಾನದ ಸುತ್ತಲೂ ಕೊಳೆಯೇ ತುಂಬಿತ್ತು. ದೇವಸ್ಥಾನ ಶಾಂತಿಯ ತವರುಮನೆಯಾಗಿರುವುದರ ಬದಲು ಎಲ್ಲಿಡೆಯೂ ಗದ್ದಲ, ಸೊಳ್ಳೆಗಳ ಸಂಗೀತ ಇವುಗಳಿಂದಲೇ ತುಂಬಿ ಹೋಗಿದ್ದಿತಂತೆ. ಗಾಂಧೀಜಿ ಜ್ಞಾನವಾಪಿಯ ಬಳಿ ಹೋದಾಗ ಸ್ವಾರಸ್ಯದ ಕತೆಯೇ ನಡೆಯಿತು."

"ಏನು? ಅಲ್ಲಿ ಸುತ್ತಮುತ್ತ ಇರುವ ಕೊಳೆ ಕೆಸರಿನಲ್ಲಿ ಜಾರಿ ಬಿದ್ದರೇ? ಹಲ್ಲು ಮುರಿಯಿತೇ?"

"ಗಾಂಧಿ ಅಜ್ಜನಿಗೆ ಅಲ್ಲಿ ಬಿದ್ದು ಹಲ್ಲು ಇಲ್ಲದಂತಾಯಿತೆಂದು ಭಾವಿಸಿದೆಯಾ? ಅಲ್ಲಿ ಸುತ್ತಮುತ್ತ ಕೊಳೆಯಿತ್ತು ನಿಜ. ಗಾಂಧೀಜಿಗೆ ಅಲ್ಲಿ ದೇವರು ಕಾಣಸಿಗಲಿಲ್ಲ. ಅದರಿಂದ ಅವರಿಗೆ ಒಳಗೊಳಗೆ ಸಿಟ್ಟು ಬಂದಿತ್ತು. ಆದ್ದರಿಂದ ಅಲ್ಲಿರುವ ಪಂಡಾಜಿಗೆ ಒಂದು ಪಾವಾಣೆ ಕಾಣಿಕೆಯಿತ್ತರು. ಪಂಡಾಜಿಗೆ ಸಿಟ್ಟು ಬಂತು."

"ಸಿಟ್ಟು ಬಂದರೂ ಮಾಡುವುದೇನು?"

"ತಮ್ಮಾ! ಹಣಕ್ಕಾಗಿ ಜನ ಏನೂ ಮಾಡಲೂ ಸಿದ್ಧರಿರುತ್ತಾರೆ. ಅಷ್ಟು ತಿಳುವಳಿಕೆ ಬೇಕಲ್ಲಾ! ಗಾಂಧೀಜಿಯನ್ನು ಬೈದು—'ಹೀಗೆ ನೀನು ಮಾಡಿದ ಅಪಮಾನ ನಿನ್ನನ್ನು ನೇರಾಗಿ ನರಕಕ್ಕೆ ಎಳೆದೊಯ್ಯುತ್ತದೆ' ಎಂದು ಸಿಟ್ಟಿನಿಂದ ಪಾವಾಣೆಯನ್ನೆಸೆದು ಬಿಟ್ಟರು."

"ಮತ್ತೇನಾಯಿತಣ್ಣಾ!"

"ಆಗುವುದೇನು? ಗಾಂಧಿ ಅಜ್ಜ ಆ ಹಾಳು ಪಂಡಾಜಿಗೆ ಬೆದರುವವರಲ್ಲವೇ? 'ಸ್ವಾಮಿಾ! ಸತ್ಯಕ್ಕೆ ಮಾತ್ರ ಹೆದರಬೇಕು' ಎನ್ನುವವರಲ್ಲವೇ? ಬೇಕಿದ್ದರೆ ತೆಗೆದುಕೊಳ್ಳಿರಿ. 'ತಮ್ಮಂಥವರಿಂದ ಇಂಥಾ ಮಾತುಗಳು ಹೊರಬರುವುದು ಯೋಗ್ಯವಾಗಿ ಕಾಣುವುದಿಲ್ಲ. ಕಾಸನ್ನು ತೆಗೆದುಕೊಳ್ಳಿರಿ. ಇಲ್ಲವಾದರೆ ಅದನ್ನೂ ಕಳೆದುಕೊಳ್ಳುವಿರಿ' ಎಂದರು. 'ನಡೆ ನಡೆ ನಿನ್ನ ಕಾಸು ನಮಗೆ ಬೇಡ'ವೆಂದು ಗಾಂಧೀಜಿಗೆ ಬೈಗಳ ಸುರಿಮಳೆಯೂ ಸಿಕ್ಕಿತು."

"ಅಣ್ಣಾ! ಗಾಂಧಿ ಅಜ್ಜನಿಗೆ ದೇವಸ್ಥಾನಕ್ಕೆ ಹೋಗಿ ಸಿಕ್ಕಿದ್ದು ಬೈಗಳ ಸುರಿಮಳೆಯೇನು? ಪಾಪ!"

"ಗಾಂಧಿ ಅಜ್ಜನಿಗೆ ಅದು ಹೊಸತೇ? ತಿಳುವಳಿಕೆಯಿಲ್ಲದ ಮಂದಿ ಹಾಗೆ ಮಾಡುತ್ತಾರೆಂದು ಅದಕ್ಕಾಗಿ ಬೇಸರಿಸುವವರು ಅವರಲ್ಲ. ಗಾಂಧೀಜಿ ಆ ಕಾಸನ್ನು ಹಿಡಕೊಂಡು ಅಲ್ಲಿಂದ ಹೊರಡಲುದ್ಯುಕ್ತರಾದರು"

"ಪಂಡಾಜಿಗೆ ಅದೂ ಇಲ್ಲದಾಯಿತೇ? ಇದ್ದದ್ದೂ ಹೋಯಿತು ಮದ್ದಿನ ಗುಣದಿಂದ ಎನ್ನುವ ಹಾಗಾಯಿತು."

"ಛೆ! ಛೆ! ಪಂಡಾಜಿಗಳು ಹಾಗೆಲ್ಲಾ ಕಾಸು ಬಿಡುವರೇ. ಪುನಃ ಅವರನ್ನು ಕರೆದು ಆ ಕಾಸನ್ನು ಇಲ್ಲಿ ಬಿಟ್ಟು ಹೋಗು ನಿನ್ನಂತೆ ನಾವಿಲ್ಲ. ಅದನ್ನಿಲ್ಲಿ ಬಿಟ್ಟುಹೋಗದಲ್ಲಿ ನಿನಗೆ ಕೇಡಾದೀತು ಎಂದು ಅವರಿಂದ ಕಾಸನ್ನು ವಸೂಲು ಮಾಡಿಕೊಂಡರು"

"ಅಣ್ಣಾ! ಅವರಿಗೆ ಒಂದಿಷ್ಟೂ ನಾಚಿಕೆಯಿಲ್ಲವೇ? ಎಂಥಾ ಕಪಟಿಗಳು"

"ತಮ್ಮಾ! ಇಂಥವರಿಂದಲೇ ಜನರಿಗೆ ದೇವಸ್ಥಾನಕ್ಕೆ ಹೋಗುವ ಬಗ್ಗೆ ತಿರಸ್ಕಾರವುಂಟಾಗಿದೆ ಎಂದರೂ ತಪ್ಪಲ್ಲ. ಹಣ ಹಣ ಎಂದು ಕೇವಲ ಹಣಕ್ಕಾಗಿ ಮರ್ಯಾದೆಯನ್ನೂ ಲೆಕ್ಕಿಸದೆ ನಾಯಿಗಿಂತಲೂ ಕೀಳಾಗಿ ಬಾಳುವೆ ಮಾಡುವುದಕ್ಕೂ ನಮ್ಮ ಜನ ಹೇಸುವುದಿಲ್ಲವೆಂಬುದೇ ಶೋಚನೀಯ ವಿಷಯವಾಗಿದೆ. "ಸ್ವರ್ಗದ ಬಾಗಿಲಲ್ಲಿ ನರಕದ ನಾಯಿ ಗಳು" ಎಂದು ಸುಮ್ಮಗೆ ಹೇಳುತ್ತಾರೇನು?"

"ಅಣ್ಣಾ! ಧರ್ಮದೇವರುಗಳ ಹೆಸರಲ್ಲೂ ಅನ್ಯಾಯ ಮಾಡ ಹೊರಟವರ ಗತಿಯೇನು?"

"ಹೊಟ್ಟೆಗಾಗಿ ಜನರು ಯಾವ ವೇಷ ಕಟ್ಟಲೂ ಸಿದ್ಧರಿರುತ್ತಾರೆ. ಹಣವಿದ್ದವನನ್ನು ಅಪ್ಪನೆನ್ನುವುದಕ್ಕೆ ತಯಾರಾಗುತ್ತಾರೆ. ಅದರಿಂದಲೇ ನಮ್ಮ ದೇಶದ ಸ್ಥಿತಿ ಹೀಗಾಗಿದೆ. ಹಣದ ಗುರುತು ಹೊರತು ಮನುಷ್ಯ ರಿಗೆ ಇನ್ನಾವುದರ ಗುರುತೂ ಇಲ್ಲ. ಹಣವಿದ್ದರೆ ತಂದೆಯನ್ನು ಮಗ ಪೂಜಿಸುತ್ತಾನೆ, ಹಣವಿದ್ದರೆ ತಂದೆ ಮಗನನ್ನು ಶ್ಲಾಘಿಸುತ್ತಾನೆ. ಎನ್ನು ವಂತೆ ನಮ್ಮ ಬಾಳುವೆಯಾದರೆ ನಮಗೆ ದೊರೆಯುವ ಗತಿ ಅಧೋಗತಿ ಯಲ್ಲದೆ ಮತ್ತೇನು?"

"ಕಾಶಿಯಲ್ಲಿ ಮತ್ತೇನು ಮಾಡಿದರಣ್ಣಾ! ಗಾಂಧಿ ಅಜ್ಜ ಹೋದಲ್ಲೆಲ್ಲಾ ವಿಚಿತ್ರ ಘಟನೆಗಳೇ ಸರಿ"

"ಹೌದು, ಮಹಾಪುರುಷರ ಬಾಳುವೆ ಇಂಥಾ ವಿಚಿತ್ರ ಘಟನೆಗಳಿಂದ ಕೂಡಿಕೊಂಡಿರುತ್ತದೆ. ಗಾಂಧಿ ಅಜ್ಜ ದೇವಸ್ಥಾನವನ್ನು ಸಂದರ್ಶಿಸಿ ಬೆಸೆಂಟರ ದರ್ಶನ ಮಾಡಿ ಹಿಂತಿರುಗಿದರು"

"ಆದರೆ ಹೀಗೆಯೇ ತಿರುಗಾಡುತ್ತಾ ಕಾಲ ಕಳೆದರೇ?"

"ಎಂದೂ ತಿರುಗಾಡುತ್ತಿರುವುದು ಹೇಗೆ ತಾನೆ ಸಾಧ್ಯ? ಗೋಖಲೆಯವರಿಗೆ ಗಾಂಧೀಜಿ ಮುಂಬೈಯಲ್ಲಿ ವಕೀಲ ವೃತ್ತಿ ಮಾಡಬೇಕು; ಸಾರ್ವಜನಿಕ ಕೆಲಸಗಳಲ್ಲಿ ಸಹಾಯಕರಾಗಬೇಕು ಎಂಬ ಆಶೆಯಿದ್ದಿತು. ಅವರ ಸಲಹೆಯಂತೆ ಗಾಂಧಿ ಅಜ್ಜ ಸಂತೋಷದಿಂದ ಅಲ್ಲಿರುವುದಕ್ಕೆ ಯೋಚಿಸಿದರು. ಆದರೆ ಕಕ್ಷಿಗಾರರನ್ನು ಹುರಿದುಂಬಿಸಿ ವಕಾಲತು ಪಡೆಯುವುದು ಅವರಿಗೆ ಹಿತವಾಗಿರಲಿಲ್ಲ, ಆದ್ದರಿಂದ ಗಾಂಧೀಜಿ ರಾಜಕೋಟೆಯಲ್ಲೇ ಇರುವುದು ಯೋಗ್ಯವೆಂದು ತಿಳಕೊಂಡರು. ಅಷ್ಟರಲ್ಲೇ ಎರಡು ಮೊಕದ್ದಮೆಗಳು ಸಿಕ್ಕಿದವು. ಸಂಶಯಚಿತ್ತರಾಗಿದ್ದ ಗಾಂಧೀಜಿ ಈ ಎರಡು ಮೊಕದ್ದಮೆಯನ್ನೂ ಬಲವಾಗಿ ಪ್ರತಿಪಕ್ಷದವರು ನಿಂತಿದ್ದರೂ ಗೆದ್ದೇ ಬಿಟ್ಟರು. ಅಷ್ಟರಲ್ಲೇ ಗಾಂಧೀಜಿಗೆ ಹಿತಚಿಂತಕರೊಬ್ಬರಿಂದ ಸಹಾಯವು ದೊರೆತು ಮುಂಬೈಗೆ ಪ್ರಯಾಣ ಬೆಳೆಸುವುದಾಗಿಯೂ ನಿಶ್ಚಯಗೊಂಡರು."

"ಆದರೆ ಗಾಂಧಿ ಅಜ್ಜ ಈಗ ಪುನಃ ವಕೀಲರಾದರು. ಏನೆಲ್ಲಾ ಮಾಡಿದರು?"

"ಬೊಂಬೈಯಲ್ಲಿ ವಕೀಲರಾದ ಅಲ್ಪ ಸಮಯದಲ್ಲೇ ಅವರು ಬಾಡಿಗೆ ಮನೆ ಮಾಡಿ ಸ್ಥಿರವಾಗಿ ಅಲ್ಲಿ ನಿಲ್ಲಲು ಯತ್ನಿಸಿದರು. ಅಷ್ಟರಲ್ಲೇ ಅವರ ಮಗ ಮಣಿಲಾಲನಿಗೆ ವಿಷಮ ಶೀತಜ್ವರವುಂಟಾಯಿತು. ರಾತ್ರಿಯ ಹೊತ್ತು ಸನ್ನಿ ಕೂಡ ತಲೆದೋರಿತು. ಹತ್ತು ವರ್ಷದ ಹುಡುಗನಿಗುಂಟಾದ ಅಸ್ವಸ್ಥದಿಂದ ಗಾಂಧೀಜಿ ಕಂಗೆಟ್ಟು ಹೋದರು. ಡಾಕ್ಟರರನ್ನು ಕರೆಸಿದರು. ಮಣಿಲಾಲನಿಗೆ ಮೊಟ್ಟೆಯನ್ನೂ ಕೋಳಿಮರಿಯ ಸಾರನ್ನೂ ಕೊಡಬೇಕೆಂದು ಡಾಕ್ಟರರು ಹೇಳಿದರು."

"ಮಾಂಸ ತಿನ್ನದ ಗಾಂಧಿ ಅಜ್ಜ ಏನು ಮಾಡಿದರು?"

"ಇದೇ ದೊಡ್ಡ ಕಷ್ಟವಾಯಿತು. ಹುಡುಗನಿಗೂ ಅದು ಇಷ್ಟವಿರಲಿಲ್ಲ. ಡಾಕ್ಟರರು ಅಸ್ವಸ್ಥದಲ್ಲಿರುವಾಗ ಧರ್ಮ ನೋಡಬಾರದೆಂದರೂ ಗಾಂಧೀಜಿಗೆ ಸಮಾಧಾನವಾಗಲಿಲ್ಲ."

"ಅಸೌಖ್ಯದಲ್ಲಿರುವ ಅವನಿಗೆ ಅದೇ ಮದ್ದೇನಣ್ಣಾ?"

"ತಮ್ಮಾ! ಪ್ರಾಣ ಉಳಿಯಬೇಕೆಂಬ ಆಸೆಯಿದ್ದರೆ ಅದನ್ನೂ, ನೀರು ಸೇರಿಸಿದ ಹಾಲನ್ನೂ ಕೊಡಬೇಕೆಂದು ಡಾಕ್ಟರರು ಹೇಳಿದ್ದರು. ಗಾಂಧೀಜಿ ಧರ್ಮಸಂಕಟದಲ್ಲಿ ಬಿದ್ದರು. ಮಗನ ಪ್ರಾಣ ಉಳಿಯಲೆಂದು ಬಗೆದರೆ ಧರ್ಮ ಕೆಡಬೇಕಾಗುವುದು. ಧರ್ಮವನ್ನು ಕಾಯ ಹೊರಟರೆ ಹುಡುಗನ ಪ್ರಾಣಪಕ್ಷಿ ಹಾರಿ ಹೋಗಬಹುದು. ಅವರು ಬೇರೇನಾದರೂ ಉಪಾಯ ಹೇಳಿರಿ ಎಂದು ಬಹುವಾಗಿ ಕೇಳಿಕೊಂಡರು. ಬೇರೆ ಉಪಾಯವಿಲ್ಲವೆಂದು ಡಾಕ್ಟರರು ಹೇಳಿದಾಗ ಗಾಂಧೀಜಿ ತುಂಬಾ ಗೊಂದಲದಲ್ಲಿ ಬೀಳುವ ಹಾಗಾಯಿತು."

"ಅಣ್ಣಾ! ಮಗನ ಮೇಲಿನ ಮಮತೆಗಿಂತ ಧರ್ಮ ದೊಡ್ಡದೇ?"

"ಗಾಂಧೀಜಿಯ ಧರ್ಮ ಅಂಥಾದ್ದೆ. ಯಾರೂ ಮಾಂಸ ಮೊಟ್ಟೆ ತಿನ್ನಬಾರದೆಂಬುದೇ ಅವರ ಸಿದ್ಧಾಂತವಾಗಿತ್ತು. ಪ್ರಾಣವನ್ನು ಉಳಿಸುವುದಕ್ಕಾಗಿ ಮಾಡುವ ಕೆಲಸಕ್ಕೂ ಒಂದು ಮಿತಿಯಿರಬೇಕು ಎಂಬುದು ಅವರ ನಿಶ್ಚಯವಾಗಿತ್ತು."

"ಅಣ್ಣಾ! ಇದು ಎಂಥಾ ಯೋಚನೆಯೋ ಎಂಥಾ ನಿಶ್ಚಯವೋ ಇದರೊಂದರ ಅರ್ಥವೂ ನನಗಾಗುವುದಿಲ್ಲವಲ್ಲಾ!"

"ಮಗನ ಪ್ರಾಣ ಉಳಿಸುವುದಕ್ಕಾಗಿ ಮೂಕ ಪ್ರಾಣಿಗಳ ಪ್ರಾಣ ಹರಣ ಮಾಡುವುದು ಗಾಂಧಿ ಅಜ್ಜನಂಥಾ ವಿಶಾಲ ಹೃದಯವುಳ್ಳವರಿಗೆ ಮೆಚ್ಚುಗೆಯಾದೀತೇ? ಸರ್ವಸಮಾನ ಬುದ್ಧಿಯನ್ನು ಇಂಥವರಿಂದಲೇ ನಾವು ಕಲಿಯಬೇಕಾಗಿದೆ."

"ಆದರೆ ಮಣಿಲಾಲನ ಗತಿ!"

"ಗಾಂಧೀಜಿ ಮನುಷ್ಯ ಯತ್ನಕ್ಕಿಂತ ದೇವರ ದಯೆಯೇ ಮುಖ್ಯವೆಂದು ಭಾವಿಸಿದ್ದರು. ಅವರಿಗೆ ಗೊತ್ತಿರುವ ಜಲಚಿಕಿತ್ಸೆಯಿಂದ ದೇವರ ದಯೆಯಿದ್ದರೆ ಹುಡುಗನನ್ನು ಸಂರಕ್ಷಿಸಬಹುದೆಂದವರು ಮನಗಂಡರು. ಮಗಮಣಿಲಾಲನು ಡಾಕ್ಟರರ ಮತ್ತು ಗಾಂಧೀಜಿಯ ಮಾತುಕತೆ ಕೇಳುತ್ತಿದ್ದಂತೆಯೇ 'ಅಪ್ಪಾ ನೀವು ಜಲಚಿಕಿತ್ಸೆ ಮಾಡಿರಿ. ನಾನು ಕೋಳಿಯ ತತ್ತಿಯನ್ನೂ ಸಾರನ್ನೂ ಕುಡಿಯುವುದಿಲ್ಲ.' ಎಂದನು."

"ತಂದೆಯ ಹಾಗೆಯೇ ಮಗ. ಗಾಂಧಿ ಅಜ್ಜನಿಗೆ ಮಗನ ಮಾತು ಕೇಳಿ ಎಷ್ಟು ಹರುಷವಾಯಿತೋ ಏನೋ?"

"ಹರುಷವಾಗಿರಬಹುದು. ಮಣಿಲಾಲನಿಗೆ ೧೦೪ ಅಂಶದ ತನಕ ಕಾವು ಏರುತ್ತಿದ್ದಿತು. ಒದ್ದೆ ಬಟ್ಟೆಯನ್ನು ಮುಖ ಬಿಟ್ಟು ಚೆನ್ನಾಗಿ ಸುತ್ತಿಬಿಟ್ಟರು. ಎಲ್ಲವೂ ಪರಮಾತ್ಮನ ಕೈಯಲ್ಲಿದೆಯೆಂದು ದೇವರ ಮೇಲೆ ಭಾರ ಹಾಕಿ ತಮ್ಮ ಕೆಲಸವನ್ನು ಭಗವಂತನ ಹೆಸರಿನಲ್ಲಿ ಶ್ರದ್ಧಾಪೂರ್ವಕ ಮಾಡಿದರು. ಆಯಾಸಗೊಂಡ ಅವರು ಈ ಕೆಲಸ ಮಾಡಿ ಕಸ್ತೂರಿ ಅಜ್ಜಿಯೊಡನೆ ನೋಡ ಹೇಳಿ ಅಡ್ಡಾಡ ಹೋದರು."

"ಪಾಪ! ಮಣಿಲಾಲನಿಗೆ ಗುಣವಾಯಿತೇನಣ್ಣಾ!"

"ತಮ್ಮಾ ಎಲ್ಲವೂ ದೇವರ ಲೀಲೆ. ಗಾಂಧಿ ಅಜ್ಜ ಹಿಂತಿರುಗಿ ಬರುವ ಹೊತ್ತಿಗೆ ಇಷ್ಟರ ತನಕ ಮೈ ಬೆವರದ ಮಣಿಲಾಲನ ಮೈ ಚೆನ್ನಾಗಿ ಬೆವರಿತು. ಗಾಂಧಿ ಅಜ್ಜನ ಎದೆ ಡಬಡಬ ಎನ್ನುತ್ತಿತ್ತು. ರಾಮಧ್ಯಾನ ಮಾಡುತ್ತಾ ಮನೆಯೊಳಗೆ ಕಾಲಿರಿಸಿದಾಗಲೇ ಮಣಿಲಾಲ—

"ಬಾಪೂ! ನೀವು ಹಿಂದಕ್ಕೆ ಬಂದಿರಾ!" ಎಂದು ಕೇಳಿದನು.

"ಬಂದೆ ಮಗೂ!"

"ಅಪ್ಪಾ! ಈಗ ನನ್ನನ್ನು ಹೊರಕ್ಕೆ ತೆಗೆಯುವುದಿಲ್ಲವೇ? ನಾನು ಸುಟ್ಟು ಹೋಗುತ್ತಿದ್ದೇನೆ."

"ಏಕಪ್ಪಾ! ಮಣಿಲಾಲ ಬೆವರುತ್ತಿದೆಯೇ?"

"'ನಾನು ಬೆವರಿನಲ್ಲಿ ಮಿಂಯುತ್ತಿದ್ದೇನಪ್ಪಾ! ಬೇಗನೆ ಹೊದಿಕೆಯನ್ನು ತೆಗೆಯುವಿರಿ ತಾನೆ?' ಎಂದನು ಮಣಿಲಾಲ; ಗಾಂಧೀಜಿಗೆ ತುಂಬಾ

ಸಂತೋಷವಾಯಿತು. ದೇವರಿಗೆ ಕೃತಜ್ಞತೆಯನ್ನು ಮನಸ್ಸಿನಲ್ಲೇ ಸಲ್ಲಿಸಿದರು. ಮಗನನ್ನು ಸುತ್ತಿದ ಬಟ್ಟೆಯಿಂದ ಹೊರತೆಗೆದರು. ಆ ಬಳಿಕ ತಂದೆ ಮಕ್ಕಳಿಬ್ಬರೂ ಒಂದೇ ಹಾಸಿಗೆಯಲ್ಲಿ ನಿದ್ದೆ ಮಾಡಿದರು. ನೀರು ಸೇರಿಸಿದ ಹಾಲು ಹಣ್ಣಿನ ರಸ ಇವುಗಳನ್ನು ಕೊಟ್ಟು ನಲುವತ್ತು ದಿನ ಚೆನ್ನಾಗಿ ಆರೈಕೆ ನೋಡಿದರು. ಮಣಿಲಾಲ ಓಡಾಡ ತೊಡಗಿದ."

"ಆಣ್ಣಾ! ಅಜ್ಜ ಗೆದ್ದು ಬಿಟ್ಟರು. ಎಲ್ಲೆಲ್ಲಿ ನೋಡಿದರೂ ದೇವರ ಸಹಾಯ ಅಜ್ಜನಿಗಿದೆ."

"ಸತ್ಯಕ್ಕೆ ಸದಾ ದೇವರ ನೆರವಿದೆ. ಶ್ರೀರಾಮನ ಕೃಪೆ ಗಾಂಧಿ ಅಜ್ಜನಲ್ಲಿ ತುಂಬಾ ಇತ್ತೆನ್ನಬೇಕು. ಅಂತೆಯೇ ಅಚಲವಾದ ಶ್ರದ್ಧೆ ಭಕ್ತಿ ವಿಶ್ವಾಸ ಎಲ್ಲವೂ ಅವರಲ್ಲಿ ನೆಲೆಯಾಗಿದ್ದವು."

"ಗಾಂಧಿ ಅಜ್ಜ ಮತ್ತೆ ಬೊಂಬೈಯಲ್ಲಿ ಸುಖವಾಗಿದ್ದರೇ?"

"ವಕಾಲತು ಚೆನ್ನಾಗಿ ದೊರೆಯುತ್ತಿತ್ತು; ಅಲ್ಲೇ ಇರಬೇಕೆಂದು ಅವರು ಯೋಚಿಸಿದರೇನೋ ನಿಜ. ಆದರೆ ಕೆಲಸಮಯದಲ್ಲೇ ಪುನಃ ದಕ್ಷಿಣ ಆಫ್ರಿಕಕ್ಕೆ ಬರಬೇಕೆಂದು ತಾರು ಬಂತು. ಹೋಗದೆ ವಿಧಿಯಿಲ್ಲ."

"ಪಾಪ! ಗಾಂಧಿ ಅಜ್ಜನಿಗೆ ಅತ್ತಿತ್ತ ಓಡಾಡುವುದೇ ಕೆಲಸವಾಯಿತಲ್ಲಾ!"

"ಪ್ರೇಮ ರಜ್ಜುವಿನಿಂದ ಬಂಧಿತರಾದ ಗಾಂಧಿ ಅಜ್ಜ ಮತ್ತೇನು ಮಾಡಲಿ? ನಮ್ಮಜ್ಜ ಎಲ್ಲರಿಗೂ ಬೇಕು."

"ಆದರೆ ಪ್ರಯಾಣ ಸಾಗಿತು ಅಲ್ಲವೇ?"

"ಹೌದು. ಗಾಂಧಿ ಅಜ್ಜ ಹೆಂಡತಿ ಮಕ್ಕಳನ್ನೆಲ್ಲಾ ಬಿಟ್ಟು ಪ್ರಯಾಣ ಬೆಳೆಸಿದರು. ಹಡಗು ಹೋಯಿತು ಮುಂದೆ; ದಡ ಸೇರಿತು; ಕಾದಿತ್ತು ಕೆಲಸವೊಂದೇ ಅದೇನೋ."

"ಅದೇ ಸೇವೆ ಎಂದೆ."

"ಓಹೋ ಗಾಂಧಿ ಅಜ್ಜನನ್ನು ನಗುತ್ತೀಯಾ?"

"ಅಷ್ಟೂ ನನಗೆ ಬುದ್ಧಿಯಿಲ್ಲವೇ? ವಿನೋದಕ್ಕಾಗಿ ಎಂದೆನಣ್ಣಾ!"

"ಅಲ್ಲಲ್ಲ ಪಿಕಟಕವಿಯಾದೆ ಅಲ್ಲವೇ?"

"ಏನೋ! ನನಗರಿಯದು."

---

— ೮ —

"ತಮ್ಮಾ! ಈ ಬಾರಿ ಗಾಂಧಿ ಅಜ್ಜ ದಕ್ಷಿಣ ಆಫ್ರಿಕಕ್ಕೆ ಹೋದವರು ಸುಮಾರುಕಾಲ ಅಲ್ಲೇ ಇರಬೇಕಾಯಿತು. ಅಲ್ಲಿನ ಮಂದಿಗಾಗಿ ಬಿಳಿಯ ರೊಡನೆ ತುಂಬಾ ಹೋರಾಡಿದರು."

"ಎಷ್ಟು ವರ್ಷಕಾಲ ಅಲ್ಲಿದ್ದರಣ್ಣಾ!"

"ಹತ್ತು ಹನ್ನೆರಡು ವರ್ಷಗಳ ತನಕ ಅಲ್ಲಿದ್ದರು. ೧೯೧೪ರ ತನಕ ಹಿಂದೀಯರಿಗೆ ಅಲ್ಲಿ ಉಂಟಾಗುತ್ತಿರುವ ಕಷ್ಟಗಳನ್ನು ಹೋಗಲಾಡಿಸಲಾಗಿ ಚಳವಳ ಹೂಡಬೇಕಾಯಿತು."

"ಅಣ್ಣಾ! ಇಷ್ಟು ವರ್ಷಗಳ ತನಕ ದೀರ್ಘಕಾಲ ಹೆಂಡತಿ ಮಕ್ಕಳ ನ್ನೆಲ್ಲಾ ಬಿಟ್ಟು ಆ ಪರವೂರಿನಲ್ಲಿ ಹೇಗೆ ಕಾಲ ಕಳೆದರೋ?"

"ಹೆಂಡತಿ ಮಕ್ಕಳನ್ನು ಹೋದ ಒಂದು ವರ್ಷದೊಳಗಾಗಿ ತಾನು ಬಹುಕಾಲ ಅಲ್ಲಿರಬೇಕಾಗುವುದೆಂದು ತಿಳಿದು ಹಿಂದುಸ್ಥಾನಕ್ಕೆ ಬಂದು ಕರ ಕೊಂಡು ಹೋದರು."

"ಅದನ್ನು ನನಗೆ ಹೇಳಲೇ ಇಲ್ಲವಲ್ಲಾ! ಮತ್ತೆ ನನಗೆ ಹೇಗೆ ತಿಳಿಯ ಬೇಕು?"

"ಸರಿ ಸರಿ, ನೀನು ಹಾಗೆಲ್ಲಾ ಹೇಳಿದರೆ ನಾನೇನು ಮಾಡಲಿ. ಬಹು ದೊಡ್ಡ ಕತೆಯಲ್ಲವೇ ನಮ್ಮ ಗಾಂಧಿ ಅಜ್ಜನದು. ಗಾಂಧಿ ಅಜ್ಜ ಪ್ರಯಾಣ ಮಾಡಿದ್ದಕ್ಕೆಲ್ಲಾ ಒಂದು ಲೆಕ್ಕ ಮಿತಿ ಇದೆಯೇ? ದಕ್ಷಿಣ ಆಫ್ರಿಕ ಎಂದರೆ ಒಂದು ಸಣ್ಣ ಊರಲ್ಲ. ಅಲ್ಲೂ ಸಾವಿರಾರು ಮೈಲು ಓಡಾಡಿದರು. ಇದ ನ್ನೆಲ್ಲಾ ಬಿಡದೆ ನಿನಗೆ ನಾನು ಹೇಳಬೇಕಾದರೆ ನನಗೆ ನನ್ನ ಜೀವನವೇ ಸಾಕಾಗದು."

"ಅಣ್ಣಾ! ಗಾಂಧಿ ಅಜ್ಜ ಮಾಡಿದ್ದನ್ನು ಹೇಳಲು ಜೀವನ ಸಾಲದೇ? ಅಬಬ್ಬಾ! ಎಂಥಾ ಸಾಹಸವೋ ನಮ್ಮಜ್ಜನದು."

"ತಮ್ಮಾ! ಗಾಂಧಿ ಅಜ್ಜನ ಒಂದು ಕೂದಲಿನ ಶಕ್ತಿಯಾದರೂ ನನ್ನಲ್ಲಿ ಇರುತ್ತಿದ್ದರೆ ನಾನು ಖಂಡಿತ ಹೇಳುತ್ತಿದ್ದೆ."

"ಅಣ್ಣಾ! ಗಾಂಧಿ ಅಜ್ಜ ಎಂದರೆ ನಿಮಗೆಷ್ಟು ಭಕ್ತಿಯೋ?"

"ತಮ್ಮಾ! ಭಕ್ತಿಯೋ ವಿಶ್ವಾಸವೋ ಅದು ನನಗರಿಯದು. ಗಾಂಧಿ ಅಜ್ಜ ಹುಟ್ಟಿದ ಈ ನೆಲದಲ್ಲಿ ಒಂದು ಇರುವೆಯಾಗಿ ಹುಟ್ಟಬೇಕಾದರೂ ಪುಣ್ಯಬೇಕು ಎಂದು ಮಾತ್ರ ನಾನು ಹೇಳಬಲ್ಲೆ. ದಕ್ಷಿಣ ಆಫ್ರಿಕಕ್ಕೆ ತೆರಳಿದ ಗಾಂಧಿ ಅಜ್ಜ ಜೋಹಾನ್ಸ್‌ಬರ್ಗ್ ಎಂಬಲ್ಲಿ ವಕಾಲತಿಗೆ ಪ್ರಾರಂಭಿಸಿದರು."

"ಅಣ್ಣಾ! ಅಲ್ಲಿ ವಕಾಲತು ನಡೆಸುತ್ತಾ ಹಿಂದೀಯರಿಗಾಗಿ ಹೋರಾಡಿದರೇ?"

"ಹೌದು. ತಮ್ಮ ಜೀವನಕ್ಕೆ ಬೇಕಾದುದನ್ನು ಸ್ವತಂತ್ರವಾಗಿ ಸಂಪಾದಿಸಿ ಸಾರ್ವಜನಿಕರಿಗಾಗಿ ಸೇವೆ ಸಲ್ಲಿಸಬೇಕೆಂದು ಗಾಂಧಿ ಅಜ್ಜನ ಅಭಿಪ್ರಾಯ ತಾನೆ. ಅಲ್ಲಿನ ಜನರ ವ್ಯವಹಾರವನ್ನು ಇವರು ಶ್ರದ್ಧಾಪೂರ್ವಕ ನಡೆಸಬೇಕಾಗಿತ್ತು. ಅನೇಕ ಬಾರಿ ಅಪಮಾನಗಳನ್ನೂ ಸಹಿಸಿಕೊಳ್ಳಬೇಕಾಯಿತು."

"ತಾನು ಹುಟ್ಟಿದ್ದು ಪರರಿಗಾಗಿ ಎನ್ನುವ ಗಾಂಧಿ ಅಜ್ಜನ ತತ್ವಕ್ಕೆ ತಕ್ಕಂತೆ ನಡೆಯಬೇಕಾದರೆ ಬಹುಕಷ್ಟವೇ ಸರಿ."

"ನಿಜ, ಒಪ್ಪಿದೆ. ಮಾನವನಾಗಿ ಹುಟ್ಟಿ ಮಾನವನಂತೆ ಬಾಳುವೆಗೈಯಬೇಕಾದರೆ ನಿಜವಾಗಿಯೂ ಕಷ್ಟ. ಕಷ್ಟ ಪಡದೆ ಯಾವುದೂ ಸುಲಭದಲ್ಲಿ ಸಿಗುವಂತಿಲ್ಲ. ಮನುಷ್ಯನು ಬಾಹ್ಯ ಸುಖಕ್ಕೆ ಮರುಳಾಗಬಾರದು; ತನಗೆ ಹಿತವಾದುದು ಯಾವುದು, ಪ್ರಿಯವಾದುದು ಯಾವುದು ಎಂಬುದನ್ನು ಮೊದಲು ತಿಳಿಯಬೇಕು."

"ದೊಡ್ಡ ಸಮಸ್ಯೆಯನ್ನೇ ನನ್ನ ಮುಂದೆ ತಂದಿಡುತ್ತಿರುವಿರಲ್ಲಾ!"

"ನಿನಗಿದು ಸಮಸ್ಯೆಯಾಗಿ ಕಾಣಲೂ ಬಹುದು. ಬುದ್ಧಿ ಬೆಳೆದವರೇ ಹಿತವಾದ್ದು ಯಾವುದೆಂದು ತಿಳಿಯದೆ ಕಷ್ಟಪಡುತ್ತಿರುವರಲ್ಲಾ! ತಮ್ಮಾ! ಹಿರಿಯರ ಬುದ್ಧಿವಾದದ ಮಾತು ಕಿರಿಯರಿಗೆ ರುಚಿಸುತ್ತದೇನು? ಕಳ್ಳನಿಗೆ—ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ—ಎಂದು ಬಸವಣ್ಣನ ಅಮೃತವಾಣಿಯನ್ನೆಂದರೆ ರುಚಿಸೀತೇ? ಆದರೆ ಇದು ಪ್ರಿಯವಾದುದಲ್ಲವಾದರೂ ಹಿತವಾದುದೇ ಸರಿ."

"ಅಣ್ಣಾ, ತಿಳಿಯಿತು, ತಿಳಿಯಿತು, ಒಳ್ಳಿತಿಗಾಗಿ ಉಳ್ಳುದು ಹಿತವಾದುದೆಂದೂ ಕೇಳುವುದಕ್ಕೆ ಮಾತ್ರ ರಮ್ಯವಾಗಿರುವುದನ್ನು ಪ್ರಿಯವಾದುದೆಂದೂ ತಿಳಕೊಳ್ಳಬೇಕಲ್ಲವೇ?"

"ತಮ್ಮಾ! ನೀನು ಬಹಳ ಚುರುಕು ಹುಡುಗ. ಸಂಸ್ಕೃತದ ಕವಿ ಭಾರವಿ ಇದನ್ನೇ 'ಹಿತಂ ಮನೋಹಾರಿಚ ದುರ್ಲಭಂ ವಚಃ' ಹಿತವೂ ಮನೋಹರವೂ ಆದ ಮಾತು ದುರ್ಲಭ ಎಂದಿದ್ದಾನೆ."

"ಗಾಂಧಿ ಅಜ್ಜ ಹಿತಕ್ಕಾಗಿ ದುಡಿದರು; ಶ್ರೇಯಸ್ಸನ್ನು ಸಾಧಿಸಿದರು. ಅಲ್ಲವೇ?"

"ನಮ್ಮಜ್ಜ ಮಾತ್ರ ಅಲ್ಲಿನ ಭಾರತೀಯರಿಗಾಗಿ ಕಷ್ಟಪಟ್ಟುದಲ್ಲ. ನಮ್ಮಜ್ಜಿಯೂ ಬಹುವಾಗಿ ಯತ್ನಿಸ ತೊಡಗಿದರು. ತುಂಬಾ ಸಾಹಸವನ್ನೇ ಮಾಡಿದರು."

"ನಮ್ಮಜ್ಜನಿಗೆ ತಕ್ಕ ನಮ್ಮಜ್ಜಿ. ಅಜ್ಜನ ಹಾಗೆ ಅಜ್ಜಿಯೂ ಮಾಡಿದರೇ?"

"ಸತ್ಯ, ನಮ್ಮಜ್ಜ ಹೇಗೆ ಆದರ್ಶ ವ್ಯಕ್ತಿಯೋ ಹಾಗೆಯೇ ನಮ್ಮಜ್ಜಿ ಆದರ್ಶ ಮಹಿಳೆ. ಈ ಇಬ್ಬರ ಜೀವನ ನಡೆ ನುಡಿ ಆಚಾರ ವಿಚಾರಗಳನ್ನರಿತು ತಮ್ಮ ಜೀವನವನ್ನು ಪ್ರತಿಯೊಬ್ಬರೂ ತಿದ್ದಿಕೊಳ್ಳಲೇ ಬೇಕು. ಅಲ್ಲಿನ ಭಾರತೀಯರ ಕೆಡುಕಿಗುಳ್ಳ ಕಾನೂನುಗಳನ್ನು ಪ್ರಚಾರಕ್ಕೆ ತರಲು ಸರಕಾರವು ಯತ್ನಿಸಿತು. ಅದರ ವಿರುದ್ಧ ಜನರನ್ನು ಕೂಡಿಕೊಂಡು ಗಾಂಧೀಜಿ ಸತ್ಯಾಗ್ರಹ ಹೂಡಬೇಕಾಯಿತು."

"ಅಣ್ಣಾ! ಸರಕಾರವನ್ನು ವಿರೋಧಿಸುವುದು ಗಾಂಧಿ ಅಜ್ಜನ ಹುಟ್ಟುಗುಣ ಎನ್ನುವ ಹಾಗಾಯಿತಲ್ಲಾ!"

"ತಮ್ಮಾ! ಹಾಗೆಣಿಸಿಕೊಳ್ಳಬೇಡ. ಅನ್ಯಾಯವನ್ನು ವಿರೋಧಿಸುವುದೇ ಗಾಂಧಿ ಅಜ್ಜನ ಹುಟ್ಟುಗುಣ. ನ್ಯಾಯದ ಕಡೆಗೆ ಸದಾ ಅವರ ಒಲವಲ್ಲವೇ? ಅವರ ಸಂಪೂರ್ಣ ಜೀವನ ಸತ್ಯವನ್ನು ಕಂಡು ಹಿಡಿಯುವುದಕ್ಕೆ ಯತ್ನಿಸುತ್ತಿತ್ತು. ಗಾಂಧಿ ಅಜ್ಜ ದಿನನಿತ್ಯದ ಪ್ರಾರ್ಥನೆಯಲ್ಲಿ ಬೇಡಿಕೊಂಡುದೂ ಹಾಗೆಯೇ ಸರಿ. ಸ್ವಾರ್ಥದಿಂದ ಬಡ ಪ್ರಜೆಗಳ ರಕ್ತ ಹಿಂಡುವುದನ್ನು

ನಮ್ಮಜ್ಜ ಎಂತು ಸಹಿಸಿಯಾರು? ಜನತೆಯ ಸೇವೆಯೇ ಜನಾರ್ಧನನ ಸೇವೆ ಎಂದು ಅವರು ಬಗೆದಿದ್ದರು."

"ಅದಿರಲಣ್ಣಾ! ನಮ್ಮಜ್ಜಿ ಯಾವ ಸಾಹಸದ ಕಾರ್ಯ ಮಾಡಿದರೆಂದು ಹೇಳುವುದಿಲ್ಲವೇ?"

"ತವರ್ಮಾ ಕಪ್ಪು ಬಣ್ಣದವರನ್ನು ಒಂದಲ್ಲ ಒಂದು ವಿಧದಿಂದ ಬಿಳಿ ಬಣ್ಣದ ಮಂದಿ ಸೋಲಿಸುವುದಕ್ಕೆ ಯತ್ನಿಸುತ್ತಿತ್ತು. ಬೋಅರ್ ಯುದ್ಧದ ತರುವಾಯ ಕಪ್ಪು ಬಣ್ಣದ ಜೂಲ್ ಜನಾಂಗದವರು ಬ್ರಿಟಿಷರಿಗೆ ತಮ್ಮ ರಾಜ್ಯ ಬಿಡಬೇಕು ಎಂಬ ಕಾನೂನು ಹೊರಟಿತು. ಇನ್ನೊಬ್ಬರ ಮನೆಮಾ ರೆಲ್ಲಾ ಬಿಡಿಸಿ ತಾವು ಸುಖ ಅನುಭವಿಸಿ ಅವರು ಬೀದಿ ಬೀದಿ ಅಲೆಯಬೇಕು ಎಂದರೆ ಇದು ಒಂದು ಮನುಷ್ಯ ಸ್ವಭಾವವೆನ್ನಿಸುವುದೇ? ಈ ನೀತಿಗೆ ಜೂಲ್ ಜನಾಂಗ ಶರಣು ಎನ್ನಲಿಲ್ಲ. ದಂಗೆ ಎದ್ದಿತು. ಯುದ್ಧವೇ ಆಯಿತು. ಗಾಂಧಿ ಅಜ್ಜ ಸೇವೆಗಾಗಿ ದಳ ಕಟ್ಟಿಕೊಂಡರು. ಗಾಂಧಿ ಅಜ್ಜ ಈ ಬಾರಿಯೂ ಪದಕ ಪಡೆದರು. ಇದರ ತರುವಾಯ ಭಾರತೀಯರ ಮೇಲೆ ಬ್ರಿಟಿಷರ ಕಣ್ಣು ಜೋರಾಯಿತು. ಗಾಂಧಿ ಅಜ್ಜ ಸತ್ಯಾಗ್ರಹ ಹೂಡಬೇಕಾಯಿತು. ಆಗ ನಮ್ಮಜ್ಜಿ ಕೂಡ ಮುಂದೆ ಬಂದು ಮಹಿಳೆಯ ರನ್ನು ಹುರಿದುಂಬಿಸಿ ಸತ್ಯಾಗ್ರಹಕ್ಕೆ ಅಣಿಯಾದರು."

"ಅಜ್ಜಿ ಕೂಡ ಸತ್ಯಾಗ್ರಹ ಮಾಡಿದರೇ? ಅಣ್ಣಾ! ಅಷ್ಟು ಧೈರ್ಯ ಸಾಹಸ ಸಾಮರ್ಥ್ಯ ನಮ್ಮಜ್ಜಿಗಿತ್ತೇ?"

"ಮತ್ತೆ ನಮ್ಮಜ್ಜಿ ಸಾಮಾನ್ಯರೆಂದು ತಿಳಕೊಂಡೆಯಾ? ನಮ್ಮ ದೇಶ ಹೇಗೆ ಮಹಾಪುರುಷರ ಜನ್ಮಭೂಮಿಯೋ ಹಾಗೆಯೇ ವೀರ ರಮಣಿಯರ, ಆದರ್ಶ ಮಹಿಳೆಯರ ಜನ್ಮಭೂಮಿ ಎಂಬುದನ್ನು ಮರೆತು ಬಿಟ್ಟೆಯಾ?"

"ಇಲ್ಲ, ಇಲ್ಲ. ನಮ್ಮಜ್ಜಿ ಇಷ್ಟು ಮುಂದೆ ಬಂದಾರೆಂದು ಮಾತ್ರ ನಾನೆಣಿಸಿರಲಿಲ್ಲ."

"ಆದರೆ ನೀನೊಬ್ಬ ಬಲು ಹೆಡ್ಡ. ನಮ್ಮಜ್ಜ ಹೇಗೆ ದೇಶಕ್ಕಾಗಿ ದುಡಿ ದರೋ ಹಾಗೆಯೇ ನಮ್ಮಜ್ಜಿಯೂ ದೇಶಕ್ಕಾಗಿ ದುಡಿದರು. ನಮ್ಮಜ್ಜನ ಕತೆ ಹೇಗೆ ವಿಚಿತ್ರವೋ, ಹಾಗೆಯೇ ನಮ್ಮಜ್ಜಿಯ ಕತೆ ಕೂಡ ಅತಿ ವಿಚಿತ್ರ ವಾದುದು."

"ಆದರೆ ಅಜ್ಜಿಯ ಕತೆ ಸ್ವಲ್ಪ ಹೇಳಿರಿ."

"ತಮ್ಮಾ! ಅಜ್ಜನ ಕತೆಯೇ ಬಹಳ ಉದ್ದವಾಗಿದೆ. ಅದರೊಂದಿಗೆ ಅಜ್ಜಿಯ ಕತೆಯನ್ನೂ ಹೇಳತೊಡಗಿದರೆ ಹೇಗೆ ಮುಗಿಯಬಹುದು."

"ಆದರೂ ಕೇಳಬೇಕೆಂದು ನನಗೆ ತುಂಬಾ ಆಸೆ. ಹೇಳುವುದಿಲ್ಲವೇ?"

"ಹೇಳುತ್ತೇನೆ. ಆದರೆ ಅಷ್ಟು ವಿವರವಾಗಿ ಸದ್ಯ ಹೇಳಲಾರೆ. ಅಜ್ಜನ ಕತೆಗೆ ಹೊಂದಿಸಿಕೊಂಡು ಅಲ್ಪ ಸ್ವಲ್ಪ ಮಾತ್ರ ಹೇಳುತ್ತೇನೆ. ಬೇಕಿದ್ದರೆ ಅಜ್ಜಿಯ ಕತೆಯನ್ನೇ ಇನ್ನೊಮ್ಮೆ ಹೇಳುತ್ತೇನೆ."

"ಅಣ್ಣಾ! ಇನ್ನೊಮ್ಮೆ ಹೇಳುತ್ತೀರಾ?"

"ನಿಶ್ಚಯವಾಗಿಯೂ ಹೇಳುವೆ. ಅಜ್ಜನ ತತ್ವ ಅಜ್ಜನ ಕತೆ ಇವನ್ನೆಲ್ಲಾ ಹೇಳುವಾಗ ಅದನ್ನೂ ಸೇರಿಸಿಕೊಂಡರೆ ನಾನು ಕಷ್ಟದಲ್ಲಿ ಬೀಳಬೇಕಾದೀತು."

"ಪಾಪ ಅಣ್ಣನಿಗೆ ತಮ್ಮನ ಕಾಟ. ಇನ್ನೊಮ್ಮೆ ಹೇಳಿರಿ. ಆದರೆ ಬಿಳಿಯರು ಕಪ್ಪು ಜನರನ್ನು ಬಡ ದನವನ್ನು ಹುಲಿ ಹಿಂಸಿಸುವ ಹಾಗೆ ಹಿಂಸೆ ಮಾಡುವುದಕ್ಕೆ ತೊಡಗಿದರಲ್ಲವೇ? ಅದರ ಮುಂದಿನ ಕತೆ ಸಾಗಲಿ."

"ಕವಿಗಳಂತೆ ಬಹಳ ಉದಾಹರಣೆ ಕೊಡುವುದಕ್ಕೆ ತೊಡಗಿದೆಯಲ್ಲಾ."

"ಕತೆ ಹೇಳುವ ಅಣ್ಣ ಕತೆಗಾರನಾದರೆ ನಾನು ಕವಿಯಾಗುತ್ತೇನೆ. ಅಣ್ಣನ ತಮ್ಮ ನಾನಲ್ಲವೇ?"

"ತಮ್ಮಾ ನಿನ್ನ ವಿಚಿತ್ರ ವಾದ ಸದಾ ಇದ್ದೇ ಇದೆ. ಬಿಳಿಯರು ಮಾಡಿದ ಕಾನೂನಿಗೆ ಭಾರತೀಯರು ಒಪ್ಪಬೇಕೆಂದೂ ತದ್ವಿರುದ್ಧವಾಗಿ ನಡೆದರೆ ರಾಜ್ಯವನ್ನು ಬಿಟ್ಟು ತೊಲಗಬೇಕೆಂದೂ ಸುಗ್ರೀವಾಜ್ಞೆ ಆಗಲೇ ಹೊರಟಿತು."

"ಹೇಳಿದ್ದಕ್ಕೆಲ್ಲಾ ಒಪ್ಪಬೇಕೇ?"

"ಅದೇ ಸುಗ್ರೀವಾಜ್ಞೆ ಎಂದೆ. ತಮ್ಮಾ, ಅವರು ಹೇಳಿದ ಹಾಗೆ ನಾವು ಕುಣಿಯಬೇಕು; ಅವರು ಹೇಳಿದ ಹಾಗೆ ಕುಣಿಯತಕ್ಕ ಕಪಿಗಳು ನಾವು; ಎಂದು ಅವರ ಯೋಚನೆ. ಅದಕ್ಕೆಲ್ಲಾ ಒಪ್ಪಿ ಸುಮ್ಮನಿರಲು ನಮ್ಮಜ್ಜ

ಬಿಡುತ್ತಾರೇನು? ಒಪ್ಪಬೇಡಿರಿ; ಹೆಬ್ಬೆಟ್ಟು ಒತ್ತಬೇಡಿರಿ; ಎಂದು ಗಾಂಧಿ ಅಜ್ಜ ಸಭೆ ಕರೆದು ಸಾರಿದರು. ಈ ಬಗ್ಗೆ ಸತ್ಯಾಗ್ರಹವೇ ಆಯಿತು."

"ಅಣ್ಣಾ! ನೀವು ಬಾರಿ ಬಾರಿಗೂ ಸತ್ಯಾಗ್ರಹ ಎನ್ನುತ್ತೀರಿ, ಸತ್ಯಾಗ್ರಹ ಎಂದರೇನೋ ನನಗರಿಯದು. ಇದು ಒಂದು ಹೊಸ ಗ್ರಹ ವೇನು?"

"ಹೌದು. ಇದೂ ಒಂದು ಹೊಸ ಗ್ರಹ. ಇದನ್ನು ವಿಜ್ಞಾನಿಗಳು ಕಂಡು ಹಿಡಿಯಲಿಲ್ಲ. ಜೋಯಿಸರ ಲೆಕ್ಕಕ್ಕೆ ಇದು ಬರಲಿಲ್ಲ. ಇದು ಅಂಥಾ ಒಂದು ವಿಚಿತ್ರ ಗ್ರಹ"

"ಅಣ್ಣಾ! ಸುಲಭದಲ್ಲಿ ತಮ್ಮನನ್ನು ಸೋಲಿಸಿ ಬಿಡುತ್ತೀರಲ್ಲವೇ? ಹಾಗೆಂದರೆ ಏನು ಎಂದು ಕೇಳಿದೆ. ತಮ್ಮನಿಗೆ ನೀವು ತಿಳಿಸದೆ ಇದ್ದರೆ ಮತ್ತಾರು ತಿಳಿಸಬೇಕು."

"ಓಹೋ! ಅಣ್ಣನಿಗೆ ಬಹು ದೊಡ್ಡ ಭಾರ ಅಲ್ಲವೇ?"

"ಅಣ್ಣನಿಗೆ ಹೊರೆಯೆಂದು ನಾನು ಹೇಳಲಿಲ್ಲ ತಾನೆ?"

"ಅಂತೂ ಹೇಗಾದರೂ ಗೆಲ್ಲುವವನು ನೀನೇ ಸರಿ. ಸತ್ಯದ ಬಗ್ಗೆ ತೋರುವ ಆಸಕ್ತಿಯೇ–ತಪ್ಪು ದಾರಿ ಹಿಡಿದವರನ್ನು ತಿದ್ದುವುದೇ ಸತ್ಯಾಗ್ರಹ, ಮಾಡಿದ ತಪ್ಪನ್ನು ತೋರಿಸಿ ಕೊಟ್ಟು ಅಹಿಂಸಾ ಮಾರ್ಗದಿಂದಲೇ ಸತ್ಯವನ್ನು ಸಾಧಿಸುವುದು. ಗಾಂಧಿ ಅಜ್ಜನ ಸತ್ಯಾಗ್ರಹದ ಗುರಿಯಾಗಿದ್ದಿತು. ಸರಕಾರದ ವಿರೋಧವಾಗಿ ಚಳವಳ ಪ್ರಾರಂಭವಾಯಿತು."

"ಅಣ್ಣಾ! ಆ ಗೌಜಿ ನೋಡಬೇಕಿತ್ತು. ಎಷ್ಟು ಜೈ ಹಾಕಿದರೋ, ಎಷ್ಟು ಗಲಭೆ ಮಾಡಿದರೋ ಪರಮಾತ್ಮನೇ ಬಲ್ಲ!"

"ನಿನಗೆ ಗೌಜಿ ನೋಡುವುದೆಂದರೆ ಬಹಳ ಇಷ್ಟ ಅಲ್ಲವೇ? ಹಾಗೆ ಕಷ್ಟ ಬರುವುದು ಮಾತ್ರ ಪ್ರಯಾಸದ ಕೆಲಸ."

"ಅದೇನು ಪ್ರಯಾಸ, ಎಲ್ಲರೊಂದಿಗೆ ಜೈ ಹಾಕಿತು, ಗಲಾಟೆ ಮಾಡಿತು, ಜೈಲಿಗೆ ಹೋಯಿತು ಇಷ್ಟಾದರೆ ಆಯಿತಲ್ಲವೇ? ಎಲ್ಲರೊಂದಿಗೆ ಹೀಗೆ ಮಾಡುವುದು ಬಹಳ ಸಂತೋಷವಲ್ಲವೇ?"

"ಸ್ವಾತಂತ್ರ್ಯ ಪ್ರಿಯನಿಗೆ ಇದು ಇಷ್ಟವಾಗಬಹುದು, ಆದರೆ ನೀನು ಬಾಯಿ ಮಾತಿನಿಂದ ಹೇಳಿದಷ್ಟು ಸುಲಭವೆಂದು ಭಾವಿಸಿದೆಯಾ? ಪೋಲೀಸರ ಟೊಪ್ಪಿ ಕಂಡರೇ ನಿನ್ನಂಥಾ ಪುಕ್ಕರು ಪರಾರಿಯಾಗಬಹುದು."

"ಅಣ್ಣಾ! ನಾನೇನು ಪುಕ್ಕನೇ?"

"ನೀನು ಪುಕ್ಕನಲ್ಲವೆಂದು ತೋರಿಸಿ ಕೊಡು. ಆಗ ನಾನು ನಿನ್ನನ್ನು ಧೈರ್ಯಶಾಲಿ ಎನ್ನ ಬಲ್ಲೆ."

ಅಣ್ಣಾ! ಹಾಗೆಲ್ಲಾ ನಾನು ಹೆದರಲಾರೆ. ತಮ್ಮ ಹೇಡಿ ಎನ್ನುವುದಕ್ಕೆ ನಿಮಗೆ ನಾಚಿಕೆ ಆಗುವುದಿಲ್ಲವೇ?"

"ಹೌದು ಹೌದು, ಬಹಳ ನಾಚಿಕೆಯಾಗುತ್ತಿದೆ. ನೀನು ಮಹಾ ಸಾಹಸಿ, ಮಹಾಪರಾಕ್ರಮಿ, ಅದ್ವಿತೀಯ ಬಾಹುಬಲ ಪರಾಕ್ರಮಿ, ಪ್ರಳಯ ಕಾಲರುದ್ರಸ್ವರೂಪಿ, ಇತ್ಯಾದಿ ಇತ್ಯಾದಿ ಎಂದು ಹೆಮ್ಮೆಪಡುತ್ತೇನಾಗದೇ?"

"ಅಣ್ಣಾ! ಹೀಗೆಲ್ಲಾ ಹೇಳಿದರೆ ನನಗೆ ಹೆದರಿಕೆಯೇ ಆಗುತ್ತಿದೆ."

"ಅದೇಕೆ?"

"ಕೋಪಿಸದಿದ್ದರೆ ಮಾತ್ರ ಹೇಳುತ್ತೇನೆ."

"ಕೋಪ ಇಲ್ಲ."

"ನಿಶ್ಚಯವಾಗಿಯೂ....."

"ನಿಶ್ಚಯವಾಗಿಯೂ ಇಲ್ಲ, ತಮ್ಮ ಹೇಳಿದನೆಂದು ಅಣ್ಣ ಕೋಪಿಸುತ್ತಾನೇನು?"

"ಬೇಡ, ನಾನು ಹೇಳುವುದಿಲ್ಲ"

"ಆಗಲಿ, ಕೇಳಿ ಬಿಡೋಣ."

"ಕೋಪ ಮಾಡಬಾರದು."

"ನನ್ನಲ್ಲಿ ಅಷ್ಟು ನಂಬಿಕೆಯಿಲ್ಲವೇ? ಅಷ್ಟೂ ಹೆದರಿಕೆಯೇ?"

"ಇಲ್ಲ, ಅಣ್ಣಾ! ಬಯಲಾಟದಲ್ಲಿ ನಿಮಗೆ ಒಳ್ಳೆಯ ಪಾತ್ರ ಸಿಕ್ಕೀತು. ಎಡಬಲ ನಿತ್ತು ರಾಜ ರಾಜಾಧೀಶ ಎನ್ನುವ ಪಾತ್ರ ಅಲ್ಲವೇ?"

ತಮ್ಮಣ್ಣಾ! ಬಹಳ ಜೋರಾಗಿದ್ದಿಯಲ್ಲವೇ? ನಿನಗೂ ಅದರಲ್ಲಿ ಯೋಗ್ಯವಾದದು ಇಲ್ಲವೇನು?"

"ಯಾವುದು?"

"ಬೇಸರಪಡಬಾರದು."

"ಹೂಂ ಇಲ್ಲ."

"ಆ ಉದ್ದ ಕೈಯ ಅಂಗಿಹಾಕುವ ಪಾತ್ರ ಯಾವುದು ನೀನೇ ಹೇಳು."

"ಆ ಕೋಡಂಗಿಯೇ?"

"ಅದೇ."

"ಅಣ್ಣಾ ಸಾಕು ಸಾಕು ಕತೆ ಹೇಳಿರಿ."

"ಓಹೋ ಈಗ ಕತೆ ಹೇಳಬೇಕೆ?"

"ಅಲ್ಲ ಮತ್ತೆ!"

"ಆಗಲಿ ಮುಂದಿನ ಕತೆ ಹೇಳುತ್ತೇನೆ, ಕೇಳು. ಚಳವಳ ಜೋರಾಯಿತು. ಎಲ್ಲರನ್ನೂ ಬಂಧಿಸಿ ಕತ್ತಲೆಕೋಣೆಗೊಯ್ಯಲಾಯಿತು. ದಿನೇ ದಿನೇ ಚಳವಳ ಅಧಿಕವಾಗುತ್ತಾ ಬಂತು.

"ಆದರೆ ಸರಕಾರ ಸೋತು ಹೋಯಿತೇ?"

"ಸರಕಾರ ಇಷ್ಟರಲ್ಲೇ ಸಂಧಾನದ ಪ್ರಶ್ನೆಯೆತ್ತಿತು. ಗಾಂಧೀಜಿಯ ಸಲಹೆಯಂತೆ ಸಂಧಾನಕ್ಕೂ ಜನರು ಒಪ್ಪಿದರು. ಗಾಂಧೀಜಿಯ ಈ ವರ್ತನೆ ಸಹಿಸದೆ ಒಬ್ಬ ಪಠಾಣನು ಗಾಂಧೀಜಿಯ ತಲೆಗೆ ಬಲವಾಗಿ ಹೊಡೆದನು?"

"ತಲೆಗೆ ಹೊಡೆದನೇ ಪಾಪ! ಸೇವೆ ಸೇವೆ ಎನ್ನುವ ಗಾಂಧಿ ಅಜ್ಜನ ಗತಿಯೇ!"

"ತಮ್ಮಾ! ಸತ್ಯದ ದಾರಿ ಎಂದೂ ಸುಲಭವಾದ್ದಲ್ಲ. ಅವನನ್ನು ಗಾಂಧೀಜಿ ಪ್ರೀತಿಯಿಂದಲೇ ಗೆದ್ದರು. ಹೊಡೆತದಿಂದಲಾಗಿ ಗಾಂಧಿ ಅಜ್ಜ ಮಾರ್ಗದಲ್ಲಿ ಸ್ಮೃತಿತಪ್ಪಿ ಬಿದ್ದರು. ಪೋಲೀಸರು ಅವನನ್ನು ಸೆರೆ ಹಿಡಿದರು. ಗಾಂಧೀಜಿ ಆ ಬಗ್ಗೆ ವ್ಯವಹರಣೆ ನಡೆಸಲು ಬಯಸಲಿಲ್ಲ. ಪಿರಿ

ಯಾದಿ ಕೊಡಲಿಲ್ಲ. ಕೊನೆಗೆ ಅವನೂ ಗಾಂಧಿ ಅಜ್ಜನ ಅನುಯಾಯಿ ಯಾದನು."

"ಸೋತು ಗೆಲ್ಲುವವ ನಮ್ಮಜ್ಜ."

"ಹೌದು. ಗಾಂಧಿ ಅಜ್ಜನ ಈ ಗುಣದಿಂದಲೇ ಶತ್ರುಗಳೆಲ್ಲಾ ಮಿತ್ರ ರಾದರು."

"ಗಾಂಧಿ ಅಜ್ಜ ಸತ್ಯಾಗ್ರಹ ಮಾಡಿ ಕಾನೂನನ್ನು ಮುರಿದರಲ್ಲವೇ?"

"ಸರಕಾರ ಸಂಧಾನ ಮಾಡಿತು. ಆದರೆ ಒಪ್ಪಿದ ಮಾತಿಗೆ ತಕ್ಕಂತೆ ನಡೆಯಲಿಲ್ಲ."

"ಅಣ್ಣ ಆ ಹಾಳು ಬಿಳಿಯರು ನಾಗರಿಕರೇನು? ಕೊಟ್ಟ ಮಾತಿಗೆ ತಪ್ಪುವ ಅವರನ್ನು ಹೇಗೆ ಕರೆಯಲೋ. 'ಆಸೆ ಮಾತನು ಕೊಟ್ಟು ಭಾಷೆ ತಪ್ಪುವವ ಹೊಲೆಯ' ಎಂಬ ಹಾಗಾಯಿತು. ಎಂಥಾ ಬುದಿಯೋ ಅವರದು."

"ಒಳ್ಳೆಯ ಬುದ್ಧಿ ಅವರದಾಗಿರುತ್ತಿದ್ದರೆ ಅವರು ನಿರಪರಾಧಿಗಳಾದ ಭಾರತೀಯರನ್ನು ಸುಮ್ಮನೆ ಪೀಡಿಸುವರೇ? ಮೃಗದ ಬುದ್ಧಿ ಮೃಗಕ್ಕೆ. ಮನುಷ್ಯರ ಬುದ್ಧಿ ಮನುಷ್ಯರಿಗೆ. ಪುನಃ ಪ್ರಚಂಡ ಸಭೆ ನೆರವೇರಿತು."

"ಮತ್ತೆ ನಮ್ಮಜ್ಜ ಹಾಗೆಲ್ಲ ಬಿಡುವರೇ?"

"ಜೋರಾಯಿತು ಗಲಭೆ. ೨೦೦೦ ದಾಖಲೆಯ ಪತ್ರಗಳನ್ನು ಅಗ್ನಿಗೆ ಆಹುತಿ ಕೊಟ್ಟರು. ಅಹಿಂಸೆಯ ಪೂರ್ವಕವೇ ಚಳವಳ ಭರದಿಂದ ಸಾಗಿತು. ಹಲವರ ಬಲಿದಾನವಾಯಿತು. ಗಾಂಧೀಜಿ ಸೆರೆಮನೆ ಸೇರ ಬೇಕಾಯಿತು. ಬಿಳಿಯರು ತಮ್ಮ ಅಧಿಕಾರ ನಾಶಕ್ಕೆ ಗಾಂಧೀಜಿ ಎಂಬ ದೂಮಕೇತುವಿನ ಉದಯ ಎಲ್ಲಿಂದ ಆಯಿತೋ ಎಂದು ಭಾವಿಸಿರಬಹುದು."

"ನಿಜವಾಗಿಯೂ ಸರಕಾರಕ್ಕೆ ಗಾಂಧೀಜಿಯ ಮೇಲೆ ವಿಪರೀತ ದ್ವೇಷವೇ ಉಂಟಾಗಿರಬಹುದು."

"ಆಗಿರಬೇಕು. ಆದರೆ ಗಾಂಧೀಜಿಗೆ ಯಾರ ಮೇಲೂ ದ್ವೇಷವಿರ ಲಿಲ್ಲ. ಅನ್ಯಾಯವನ್ನು ಮಾತ್ರ ಅವರು ಸಹಿಸುವಂತಿರಲಿಲ್ಲ. ಗಾಂಧೀ

ಜಿಯ ಸಾಹಸದ ಫಲವಾಗಿ ಸರಕಾರ ಮಣಿಯಿತು. ಗಾಂಧೀಜಿ ವಿಜಯಿಗಳಾದರು. ಎರಡು ತಿಂಗಳ ತರುವಾಯ ಗಾಂಧೀಜಿಯ ಬಂಧವಿಮೋಚನೆಯಾಯಿತು."

"ಅಲ್ಲಿನ ಜನರು ಗಾಂಧಿ ಅಜ್ಜನನ್ನು ಹೊತ್ತು ತಿರುಗಿದರೇನು?"

"ಗಾಂಧಿ ಅಜ್ಜನ ಮೇಲೆ ಅಲ್ಲಿನ ಭಾರತೀಯರಿಗೆ ಎಷ್ಟು ಪ್ರೇಮವುಂಟಾಯಿತೋ ಅದನ್ನು ವರ್ಣಿಸುವುದೇ ಅಸಾಧ್ಯ. ಗಾಂಧಿ ಅಜ್ಜ ಅಲ್ಲಿ ಸತ್ಯಾಗ್ರಹ, ಸೇವೆ ಇಷ್ಟನ್ನೇ ಮಾಡಿದ್ದಲ್ಲ. ನಾನಾ ವಿಧವಾದ ಶೋಧನೆಗಳನ್ನೂ ಮಾಡುತ್ತಿದ್ದರು."

"ಶೋಧನೆ ಎಂದರೆ ನಮ್ಮಜ್ಜನಿಗೆ ಜೀವ. ಅವರ ಜೀವನದ ಕತೆ 'ಸತ್ಯ ಶೋಧನೆ' ಎಂದಿರಲ್ಲಾ."

"ಹೌದು. ಮಣ್ಣು, ನೀರು ಇವುಗಳ ಉಪಯೋಗದ ಕುರಿತು ಶೋಧನೆ ಮಾಡುತ್ತಿದ್ದರು."

"ಮಣ್ಣು, ನೀರು."

"ಹೌದು. ಗಾಂಧಿ ಅಜ್ಜ ತಲೆ ನೋವಾದರೆ ಡಾಕ್ಟರರಲ್ಲಿಗೆ ಹೋಗುತ್ತಿರಲಿಲ್ಲ."

"ಮತ್ತೇನು ಮಾಡುತ್ತಿದ್ದರು."

"ಹಣೆಗೆ ತುಂಬಾ ಕೆಮ್ಮಣ್ಣನ್ನು ಲೇಪ ಹಾಕುತ್ತಿದ್ದರು."

"ಕಾಸು ಖರ್ಚಿಲ್ಲದ ಮದ್ದು ಗಾಂಧಿ ಅಜ್ಜನದು. ನಮ್ಮಜ್ಜ ಬ್ಯಾರಿಸ್ಟರು ಹಣೆಗೆ ಮಣ್ಣು ಮೆತ್ತಿಕೊಂಡರು ಅಲ್ಲವೇ?"

"ತಮ್ಮಾ ನಗುವವರು ಹಾಗೆಯೇ ನಗಬಹುದು. ಗಾಂಧಿ ಅಜ್ಜ ಮಣ್ಣಿನಲ್ಲಿರುವ ಶಕ್ತಿಯನ್ನು ಕಂಡು ಹಿಡಿದು ಅದರಿಂದಲೇ ಗಾಯಗಳನ್ನು ಗುಣಪಡಿಸುವ ನೈಪುಣ್ಯ ಸಂಪಾದಿಸಿದ್ದರು."

"ಇಷ್ಟೆಲ್ಲಾ ಕಲಿತು ಇಷ್ಟು ದೊಡ್ಡ ಜನ ಎಂದೆನಿಸಿದ ಗಾಂಧಿ ಅಜ್ಜನಿಗೆ ಹೀಗೆಲ್ಲಾ ಮಾಡುವುದಕ್ಕೆ ಹೇಗೆ ಮನಸ್ಸು ಬಂತೋ?"

"ಡಾಂಭಿಕತನದ ಆಡಂಬರದ ಜೀವನಕ್ಕೆ ಗಾಂಧಿ ಅಜ್ಜನ ಮನಸ್ಸು ಒಡಂಬಡದು."

"ಹಾಗಿದ್ದರೂ ಎಲ್ಲರೂ ಇದ್ದ ಹಾಗೆ ತಾನಿರಬೇಕಲ್ಲವೇ? ದೊಡ್ಡ ವಕೀಲರು. ಜನರ ಮುಂದಾಳು. ಹೀಗಿರುವಾಗ ಇಂಥಾ ಕೆಲಸವನ್ನೆಲ್ಲಾ ಮಾಡುವುದು ಹೇಗೆ?"

"ಗಾಂಧಿ ಅಜ್ಜ ತಾನು ದೊಡ್ಡ ಜನ ಎಂದು ತಿಳಕೊಳ್ಳಲಿಲ್ಲ. ಮನುಷ್ಯನು ಸಾಧ್ಯವಾದಷ್ಟು ಸ್ವತಂತ್ರನಾಗಿ ಜೀವಿಸಬೇಕು. ಅದು ಅವನಿಗೆ ಗೌರವ ಎಂದು ಅವರು ಮನಗಂಡಿದ್ದರು."

"ತಮ್ಮ ಅಸೌಖ್ಯಕ್ಕೆ ತಾವೇ ಮದ್ದು ಮಾಡಬೇಕೆಂದು ಬಗೆದರೇ?"

"ಸರಳ ಜೀವನ ಅವರದು. ವೃಥಾ ಹಣ ಹಾಳು ಮಾಡುವುದಕ್ಕೆ ಅವರ ಮನಸ್ಸೊಪ್ಪದು."

"ಮದ್ದಿಗಾದರೂ ಖರ್ಚು ಮಾಡಬಾರದೇ?"

"ಅಗತ್ಯ ಬಿದ್ದಲ್ಲಿ ಯೋಗ್ಯಕಂಡಲ್ಲಿ ಮಾತ್ರ ಖರ್ಚು ಮಾಡಬೇಕು. ಪ್ರತಿಯೊಬ್ಬನೂ ಮಿತವ್ಯಯಿಯಾಗಿರಬೇಕು ಎಂಬುದನ್ನು ಅವರು ಆಚರಿಸಿ ತೋರಿಸಿ ಕೊಟ್ಟರು. ಮನೆಯಲ್ಲಿ ಸೇವಕರನ್ನಿರಿಸಿ ತಾನು ದೊಡ್ಡ ವಕೀಲನೆಂದು ಗಾಂಧಿ ಅಜ್ಜ ಸೇವೆ ಮಾಡಿಸಲಿಲ್ಲ. ತಮ್ಮ ಮನೆಯ ಕೊಳೆಯನ್ನು ತಾವೇ ತೆಗೆಯುತ್ತಿದ್ದರು. ತಮ್ಮ ಮನೆಯ ಪಾಯಿಖಾನೆಯನ್ನು ತೋಟಿಯವನು ಶುಚಿ ಮಾಡಿದರೆ ಅಷ್ಟು ಚನ್ನಾಗಿರುವುದಿಲ್ಲವೆಂದು ಆ ಕೆಲಸಕ್ಕೂ ಅವರು ಹಿಂದುಳಿಯಲಿಲ್ಲ."

"ಅಣ್ಣಾ! ಆದರೆ ಆ ಕೆಲಸಕ್ಕೆ ನಾವಿಳಿದರೆ ನಮ್ಮನ್ನು ನಗಲಾರರೇ?"

"ಯಥಾರ್ಥ ನಗಬಹುದು. ನಮ್ಮ ಎಲ್ಲಾ ಆಚರಣೆಯೂ ಅದಕ್ಕೆ ತಕ್ಕಂತಿದ್ದರೆ ನಗದಿರಬಹುದು. ಗಾಂಧೀಜಿ ಒಂದೇ ಒಂದು ಮುಂಡಿನಿಂದ ಇಡೀ ಪ್ರಪಂಚವನ್ನು ಸುತ್ತಿದರೆಂದು ನಮ್ಮಿಂದ ಆ ಕೆಲಸ ಸಾಧ್ಯವೇ? ಅದೇ ಮನುಷ್ಯನ ಆತ್ಮ ಶಕ್ತಿ. ಅಂತಿರಲು ಅಂಥಾ ಎದೆ ಬೇಕು. ಅಂಥಾ ತಿಳುವಳಿಕೆ ಬೇಕು."

"ಆದರೆ ಗಾಂಧೀಜಿಯ ಜೀವನ ಬಡವರಂತೆಯೇ ಸಾಗುತ್ತಿದ್ದಿತೇ?"

"ಬಡ ಭಾರತಿಯ ಪುತ್ರ ತಾನೆಂದು ಗಾಂಧೀಜಿ ತಿಳಕೊಂಡಿದ್ದರು. ಅವರು ಮಾಡುವ ಎಲ್ಲಾ ಕೆಲಸಗಳನ್ನು ಅವರ ಮಕ್ಕಳೂ ಮಾಡ ಕಲಿ

ತಿದ್ದರು. ಮೊದಮೊದಲು ಗಾಂಧೀಜಿಯ ತತ್ವ ನಮ್ಮಜ್ಜಿಗೆ ವಿಚಿತ್ರವಾಗಿ ಕಂಡಿದ್ದರೂ ಅಜ್ಜನಿಗೆ ಅವರು ಸೇವಾಕಾರ್ಯದಲ್ಲಿ ತುಂಬಾ ನೆರವಾದರು. ಸಂಸಾರದ ಸತ್ಯ ಸ್ವರೂಪವನ್ನು ಅವರಿಂದಲೇ ಗಾಂಧಿ ಅಜ್ಜ ಕಂಡರು. ತಮ್ಮಾ ಎಲ್ಲರನ್ನೂ ಒಂದೇ ರೀತಿಯಿಂದ ಕಾಣುವುದು ಗಾಂಧಿ ಅಜ್ಜನ ಗುಣ ತಾನೆ. ಹೀಗಿರಲು ಒಮ್ಮೆ ಅಜ್ಜಿಯಿಂದ ಅಜ್ಜ ಬುದ್ಧಿ ಕಲಿತರು."

"ಅಜ್ಜಿ ಬುದ್ಧಿ ಹೇಳಿದರೇ? ಏನು ಹೇಳಿದರು?"

"ಅಜ್ಜಿಯ ಕತೆ ಕೇಳುವುದಕ್ಕೆ ನಿನಗೆ ಬಹಳ ಇಷ್ಟ ಅಲ್ಲವೇ?"

"ಹೌದು ಮತ್ತೆ ಅಜ್ಜನ ಕತೆ ಮಾತ್ರ ಕೇಳಿದರೆ ಸಾಕೇ?"

"ಗಾಂಧಿ ಅಜ್ಜನ ಮನೆಗೆ ಹಲವು ಜಾತಿಯವರು ಬರುತ್ತಿದ್ದರು. ಅವರ ಕುಟುಂಬ ನಿಯಮದಂತೆ ಅವರು ಅನ್ಯರ ಎಂಜಲು ಮುಟ್ಟ ಬಾರದು. ಪರಜಾತಿಯವರೆಂಬ ಭೇದ ಗಾಂಧಿ ಅಜ್ಜನಿಗೆ ಸಲ್ಲದು. ಇದ ರಿಂದಲಾಗಿ ಇಬ್ಬರಿಗೂ ಜಗಳವಾಯಿತು."

"ಅಜ್ಜಿ ಏನೆಂದರು?

"ಆರಾರ ಎಂಜಲು ನನ್ನ ಕೈಯಲ್ಲಿ ತೆಗೆಸುತ್ತೀರಿ, ಇಲ್ಲದ ಬವಣೆ ಕೊಡುತ್ತೀರಿ. ಹೀಗೆಲ್ಲಾ ಮಾಡುವುದು ಏಕೆ? ನನ್ನಿಂದ ಸಾಧ್ಯವಿಲ್ಲ ಎಂದರು."

"ಪಾಪ ಗಾಂಧಿ ಅಜ್ಜ ಏನು ಮಾಡಿದರು?"

"ಗಾಂಧಿ ಅಜ್ಜನಿಗೆ ಸಿಟ್ಟು ಬಂತು. ಹಾಗಿದ್ದರೆ ಮನೆ ಬಿಟ್ಟು ಹೋಗಬೇಕು ಎಂದು ಮನೆಯಿಂದ ಹೊರಗೆ ಹಾಕಿದರು."

"ಅಜ್ಜಿ ಬಿಕ್ಕಿ ಬಿಕ್ಕಿ ಅತ್ತರೇ?"

"ಅಜ್ಜಿ ಬಿಕ್ಕಿ ಬಿಕ್ಕಿ ಅತ್ತು ಏನು ಫಲ. ಮನೆಯಿಂದ ಆ ಪರವೂರಿ ನಲ್ಲಿ ಹೊರಗಟ್ಟಿದರೆ ಅವರೆಲ್ಲಿ ಹೋಗಬೇಕು. ಹಾಗೆಲ್ಲಾ ಸಿಟ್ಟುಮಾಡುವ ಸ್ವಭಾವ ಅವರದಲ್ಲ. ಗಾಂಧಿ ಅಜ್ಜ ಜೋರಾಗಿ ಬೈದರು."

"ಮತ್ತೇನು ಮಾಡಿದರು?"

"ದಯ ಮಾಡಿ ಬೊಬ್ಬೆ ಹೊಡೆಯಬೇಡಿರಿ. ಹೇಗೂ ನಾನು ನಿಮ್ಮ ಅಧೀನದಲ್ಲೇ ಇದ್ದೇನೆ. ಎಲ್ಲವೂ ನಿಮ್ಮ ಅಧಿಕಾರ! ನೆರೆಮನೆಯವರು

ಈ ಗಾಜಿಯನ್ನು ಕೇಳಿದರೆ ಏನೆಂದಾರು? ಎಂದು ಅಂಗಲಾಚಿ ಬೇಡಿಕೊಂಡರು."

"ಬಹು ಜಾಣೆ ನಮ್ಮಜ್ಜಿ."

"ಹಾಗೆಯೇ ಹೇಳು. ಗಾಂಧಿ ಅಜ್ಜನಿಗೆ ನಾಚಿಕೆಯಾಯಿತು. ತನ್ನ ಹೆಂಡತಿ ತನಗೆ ಒಳ್ಳೆಯ ಬುದ್ಧಿ ಕಲಿಸಿದಳೆಂದು ಅವರು ತಿಳಕೊಂಡರು."

"ಆದರೆ ಅಜ್ಜಿಯೂ ಅಜ್ಜನೂ ತುಂಬಾ ಜಗಳ ಮಾಡುತ್ತಿದ್ದರಲ್ಲವೇ?"

"ಜಗಳ ಮಾಡುತಿದ್ದರು; ಆದರೆ ಹೆಚ್ಚು ಜಗಳ ಮಾಡುತ್ತಿರಲಿಲ್ಲ. ಜಗಳ ಮಾಡಿ ತಪ್ಪನ್ನು ತಿದ್ದಿಕೊಳ್ಳುತ್ತಿದ್ದರು."

"ಅಣ್ಣಾ! ಹೀಗೇನಾದರೂ ಇನ್ನೂ ಜಗಳ ಮಾಡಿದರೇ?"

"ನಿನಗೆ ಜಗಳದ ಕತೆ ಕೇಳುವುದೆಂದರೆ ಬಹಳ ಇಷ್ಟವೇ? ಸೇನೆ ಬರಬೇಕು, ಆನೆ ಕುದುರೆ ಬರಬೇಕು, ಯುದ್ಧ ಆಗಬೇಕು, ಆದರೆ ನಿನಗೆ ಕತೆ ಬಹಳ ಸ್ವಾರಸ್ಯವಾಗಬಹುದಲ್ಲವೇ? ಹಾಗೆಲ್ಲಾ ಜಗಳದ ಸುದ್ದಿ ಹೇಳುವುದಕ್ಕೆ ಇದು ಭಾರತವೂ ಅಲ್ಲ, ರಾಮಾಯಣವೂ ಅಲ್ಲ."

"ಅಷ್ಟು ದೊಡ್ಡ ದೊಡ್ಡ ಜಗಳ ಇಲ್ಲದಿದ್ದರೆ ಸಣ್ಣ ಸಣ್ಣ ಜಗಳದ ಕತೆ ಸಾಕು."

"ಅನ್ಯರು ಜಗಳ ಮಾಡಿದ ಕತೆ ಕೇಳಿ ಆನಂದಪಡುವ ಪುಣ್ಯಾತ್ಮ ನೀನು. ಹಾಗಿದ್ದರೆ ನಾವೇ ಜಗಳ ಮಾಡೋಣ."

"ಜಗಳ ಮಾಡಿ ಅಣ್ಣ ಸೋತರೆ ಅಣ್ಣನಿಗೆ ನಾಚಿಕೆಯುಲ್ಲವೇ, ಬೇಡ."

"ನಾನು ಸೋತರೂ ಚಿಂತಿಲ್ಲ. ಮೊದಲು ನಿನ್ನ ಬೆನ್ನಿಗೆ ನಾಲ್ಕು ಗುದ್ದುಗಳನ್ನು ಏರಿಸಿ ಬಿಡುವೆ?"

"ಕೈ ತುರಿಸುತ್ತದೇನು?"

"ನಿನಗೆ ಆತುರವಾಗುತ್ತದೇನು?"

"ಇಲ್ಲಣ್ಣಾ! ನಿಮಗೆ ಆಶೆಯಿದ್ದರೆ ನಾನು ಜಗಳಕ್ಕೆ ಸಿದ್ಧನಿಲ್ಲ. ಬೇಕಿದ್ದರೆ ನನ್ನ ಬೆನ್ನನ್ನು ನಿಮಗೆ ಬೇಕಾದಂತೆ ಬಾಗಿಸಿ ಕೊಡಬಲ್ಲೆ."

"ಬಹಳ ಉದಾರ ಬುದ್ಧಿ ನಿನ್ನದು."

"ಅಲ್ಲಣ್ಣಾ! ಬಹಳ ಉದಾರಿಯಾಗಿ ಗುದ್ದನ್ನು ಕೊಡ ಬಯಸುವ ಅಣ್ಣಾಸಿದ್ದರೆ ಬೆನ್ನು ತೋರುವುದಕ್ಕೆ ನಾನು ಸಿದ್ಧನೇ ಸರಿ."

"ಮತ್ತೆ?"

"ಅಂದರೆ?"

"ಮತ್ತೆ ಅಳುವುದಕ್ಕೂ ಸಿದ್ಧನೇನು?"

"ಹಾಗೆಲ್ಲಾ ಅಳುವುದಕ್ಕೆ ನಾನೇನು ಹೆಂಗಸೇ?"

"ಹೆಂಗಸರು ಮಾತ್ರ ಅಳುವುದೇ? ಗಂಡಸರೂ ಅಳುವುದಿಲ್ಲವೇ?"

"ಹೆಚ್ಚಾಗಿ ಅಳುವವರು ಹೆಂಗಸರು ಅಲ್ಲವೇನಣ್ಣಾ?"

"ಇರಬಹುದು. ಆದರೆ ನಮ್ಮಜ್ಜ ನಿನ್ನ ಹಾಗೆ ಹೆಂಗಸರೆಂದರೆ ಹೇಡಿಗಳೆಂದು ಭಾವಿಸಲಿಲ್ಲ. ಅಜ್ಜಿಯೊಡನೆ ಕಾದಾಡಿರಬಹುದು. ಆದರೆ ಅದಕ್ಕಿಂತಲೂ ಹೆಚ್ಚಿನ ಗೌರವದಿಂದ ಅಜ್ಜಿಯನ್ನು ಕಾಣುತ್ತಿದ್ದರು."

"ಅಜ್ಜಿಯನ್ನು ತಾಯಿ ಎಂದು ಕರೆದಿದ್ದಾರೆಂದು ನನಗೆ ಮಾಸ್ತ್ರು ಹೇಳಿದರು."

"ಹೌದು! ಅವರು ತನ್ನ ತಾಯಿ ಎಂಬ ಹಾಗೆ ಅವರು ತಿಳಕೊಂಡಿದ್ದರು. ತನ್ನೆಲ್ಲಾ ಕಷ್ಟವನ್ನು ಲೆಕ್ಕಿಸದೆ ರಾತ್ರೆ ಹಗಲೆನ್ನದೆ ಅವರ ಸೇವೆಗೆ ನಮ್ಮಜ್ಜಿ ಮುಂದೆ ಬರುತ್ತಿದ್ದರು. ಆ ಹೊತ್ತು ಈ ಹೊತ್ತು ಎನ್ನದೆ ಹಲವಾರು ಕೆಲಸಗಳನ್ನು ಮಾಡಿಸಿ ಅವರನ್ನು ಬಳಲಿಸುವುದು ನಮ್ಮಜ್ಜನಿಗೂ ಸರಿದೋರುತ್ತಿರಲಿಲ್ಲ. ಅಜ್ಜಿಯೊಡನೆ ಹೇಳುವ ಬದಲು ಅವಳು ಸ್ವಲ್ಪ ವಿಶ್ರಾಂತಿಪಡೆಯಲೆಂದು ಅವರೇ ಸ್ವತಃ ಕೆಲಸಕ್ಕೆ ತೊಡಗುತ್ತಿದ್ದರು. ಅದನ್ನು ಕಂಡರೆ ಅಜ್ಜಿಗೆ ಬೇಸರವಾಗುತ್ತಿತ್ತು. ಅಜ್ಜ ಹೇಳದೆ ಇದ್ದರೂ ಅಜ್ಜನಿಗಾಗತಕ್ಕ ಕೆಲಸಗಳನ್ನು ಸ್ವತಃ ತಿಳಿದು ಬಹು ಜಾಣ್ಮೆಯಿಂದ ವರ್ತಿಸುತ್ತಿದ್ದಳು ನಮ್ಮಜ್ಜಿ."

"ಹಾಗಾದರೆ ಅಜ್ಜಿಗೆ ಜಾಣೆಯೆಂದೂ ಅಜ್ಜನಿಗೆ ಜಾಣ ಎಂದೂ ಬಿರುದು ಸಲ್ಲಬೇಕು."

"ತಮ್ಮಾ! ನಿನ್ನ ಬಿರುದುಬಾವಲಿಗಳನ್ನು ಯಾರು ಕೇಳುತ್ತಾರೆ. ನಮ್ಮಜ್ಜಿ ಒಮ್ಮೆ ಅಸೌಖ್ಯದಲ್ಲಿ ಬಿದ್ದರು. ಆಗ ನಮ್ಮಜ್ಜ ಸತ್ಯಾಗ್ರಹ ಹೂಡಬೇಕಾಯಿತು."

"ಮನೆಯೊಳಗೆ ಸತ್ಯಾಗ್ರಹವೇ?"

"ಹೌದು, ತಪ್ಪು ದಾರಿ ಹಿಡಿದವರನ್ನು ತಿದ್ದುವುದೇ ಸತ್ಯಾಗ್ರಹ, ಅಜ್ಜಿಯ ಮೈಯಿಂದ ರಕ್ತಸ್ರಾವವಾಗುತಿತ್ತು. ಇದಕ್ಕೆ ಮಾಂಸಾಹಾರ ಅಗತ್ಯವೆಂದು ಡಾಕ್ಟರರ ಸಲಹೆ."

"ಅಜ್ಜ ಬೇಡವೆಂದರೇ?"

"ಅಜ್ಜ ಅದಕ್ಕಂತೂ ಒಪ್ಪುವ ಹಾಗಿಲ್ಲ. ಉಪ್ಪು ಮತ್ತು ತೊಗರಿ ಇವೆರಡನ್ನು ಬಿಟ್ಟರೆ ರೋಗ ವಾಸಿಯಾಗುವುದೆಂದು ವೈದ್ಯರು ಹೇಳಿದ್ದರೂ ನಮ್ಮಜ್ಜಿ ಅದರ ವಿನಾ ಉಣ್ಣುತ್ತಿರಲಿಲ್ಲ."

"ಅಜ್ಜಿ ಹಟ ಮಾಡುತ್ತಾರೆಂದು ಸಿಟ್ಟು ಬಂತೇ?"

"ಸಿಟ್ಟು ಬಂದು ಬೈದರೆ ಸತ್ಯಾಗ್ರಹವಾಯಿತೇ? ಗಾಂಧಿ ಅಜ್ಜ ತಾನೂ ತಿನ್ನುವುದಿಲ್ಲ; ನೀನೂ ತಿನ್ನಬಾರದು. ತನಗೆ ಅದೊಂದೂ ಬೇಡ. ತಾನೆಂದೂ ತಿನ್ನಲಾರೆ ಎಂದು ಹಟಮಾಡಿ ತನ್ನ ನಿರ್ಧಾರ ಹೇಳಿದರು."

"ಮತ್ತೆ"

"ತನಗಾಗಿ ತನ್ನ ಪತಿ ತ್ಯಾಗಮಾಡಿದುದನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ತನ್ನಲ್ಲಿ ಎಷ್ಟು ಪ್ರೇಮವಿದೆ ಎಂಬುದು ಅವರಿಗೆ ವ್ಯಕ್ತವಾಯಿತು. ಪಶ್ಚಾತ್ತಾಪ ಉಂಟಾಯಿತು. ತನಗಾಗಿ ಇವನ್ನು ತ್ಯಜಿಸುವಂತೆ ಭಾಷೆ ಹಾಕಿಕೊಂಡರಲ್ಲಾ ಎಂದು ಮರುಕವುಂಟಾಗಿ—ಬೇಡ; ನನಗಾಗಿ ಬೇಡ. ನಾನು ಉಪ್ಪು ಬೇಳೆ ಇವನ್ನು ಸ್ವೀಕರಿಸುವುದಿಲ್ಲ. ತಮ್ಮ ಮಾತನ್ನು ಮಾತ್ರ ಹಿಂದೆ ತೆಗೆಯಿರಿ—ಎಂದು ಕೇಳಿಕೊಂಡರು. ನಮ್ಮಜ್ಜ ಹೇಳಿದ ಮಾತಿಗೆ ತಪ್ಪುವರೇ? ಹೇಳಿದ ಮಾತಿನಂತೆ ಆಚರಿಸುವುದಾಗಿ ತಮ್ಮ ನಿಶ್ಚಯವನ್ನು ಪ್ರಕಟಪಡಿಸಿದರು."

"ಎಷ್ಟು ಒಳ್ಳೆಯ ಗುಣ ನಮ್ಮಜ್ಜನದು?"

"ನಮ್ಮಜ್ಜಿಗೆ ಇದರಿಂದ ದುಃಖವಾಯಿತು. ಎಷ್ಟು ಬೇಡಿಕೊಂಡರೂ ಗಾಂಧೀಜಿ ಒಪ್ಪಲಿಲ್ಲ. ಕಸ್ತೂರಮ್ಮ—ತಾವು ಬಹು ಹಟವಾದಿಗಳು. ಇನ್ನೊಬ್ಬರೆಂದುದನ್ನು ಕೇಳುವ ಅಭ್ಯಾಸ ನೀವು ಮಾಡಲೇ ಇಲ್ಲ—ಎಂದರು. ಅಂತೂ ಇಬ್ಬರೂ ತ್ಯಾಗ ಮಾಡಬೇಕಾಯಿತು. ನಮ್ಮಜ್ಜಿ ಗುಣ ಹೊಂದಿದರು!"

"ಅಣ್ಣಾ! ಅಜ್ಜನಿಗೆ ಅಜ್ಜಿ ಬುದ್ಧಿ ಕಲಿಸಿದರು. ಅಜ್ಜಿಗೆ ಅಜ್ಜ ಬುದ್ಧಿ ಕಲಿಸಿದರು."

"ದಾಂಪತ್ಯ ಜೀವನವೆಂದರೇನೆಂದು ನಮ್ಮಜ್ಜನನ್ನೂ ಅಜ್ಜಿಯನ್ನೂ ನೋಡಿ ಕಲಿಯಬೇಕು. ಸುಖ ದುಃಖ ಎರಡರಲ್ಲೂ ಸಮಭಾಗಿಗಳಾಗಿದ್ದು ಪ್ರಪಂಚದ ಒಳಿತಿಗಾಗಿ ದುಡಿದ ದಂಪತಿಗಳಿದ್ದರೆ—ಅವರು ನಮ್ಮಜ್ಜ ಮತ್ತು ನಮ್ಮಜ್ಜಿ."

"ಅಣ್ಣಾ! ನಮ್ಮಜ್ಜ ನಮ್ಮಜ್ಜಿ ಈ ಇಬ್ಬರನ್ನೂ ಕಾಣಬೇಕಿತ್ತು. ಕಂಡು ಕಾಲು ಹಿಡಿಯಬೇಕಿತ್ತು. ಪ್ರಣಾಮ ಮಾಡಿ ಆಶೀರ್ವಾದ ಪಡೆಯಬೇಕಿತ್ತು ಎಂದು ನನಗನ್ನಿಸುತ್ತಿದಣ್ಣಾ!"

"ಬಹಳ ಭಕ್ತಿಯುಂಟಾಗಿದೆಯೋ ತಮ್ಮಣ್ಣನಿಗೆ—"

"ಅಲ್ಲಣ್ಣಾ! ನಿಜವಾಗಿಯೂ ಅವರ ಕತೆ ಕೇಳುವಾಗ ಅಪ್ಪಾ ಅಮ್ಮಾ ಎಂದು ಅವರನ್ನು ಅಪ್ಪಿಕೊಳ್ಳೋಣ ಎಂದೆನ್ನಿಸುತ್ತಿದೆ."

"ಭಾರತವೇ ಅವರನ್ನು ತಂದೆ ತಾಯಿ ಎಂದು ಒಪ್ಪಿಕೊಂಡಿದೆ. ಅವರ ಆಶೀರ್ವಾದ ನಮಗಿದ್ದೇ ಇದೆ; ಅವರು ನಮ್ಮ ಕಣ್ಣಮುಂದೆ ಇಂದು ಇಲ್ಲವಾದರೂ ನಮ್ಮ ಸತ್ಕಾರ್ಯವನ್ನು ನೆರವೇರಿಸುವುದಕ್ಕೆ ಅವರ ಆಶೀರ್ವಾದ ಇದ್ದೇ ಇದೆ. ಅವರ ಅದ್ಭುತ ಶಕ್ತಿಯೇ ನಮ್ಮನ್ನು ಇಂದು ಮುನ್ನಡೆಸುತ್ತಿದೆ. ಅವರು ಸಾಯಲಿಲ್ಲ. ಅವರ ನಶ್ವರ ಒಡಲು ಮಾತ್ರ ಮಾಯವಾಗಿದೆ. ಇಂದೂ ನಮ್ಮ ಕಣ್ಣಮುಂದೆ ಅವರು ನಲಿಯುತ್ತಿದ್ದಾರೆ. ಅವರ ಅಮರವಾಣಿ ನಮ್ಮ ಕಿವಿಗೆ ಕೇಳುತ್ತಿದೆ."

"ದಕ್ಷಿಣ ಆಫ್ರಿಕದಲ್ಲಿ ಹೀಗೆಲ್ಲಾ ಹೋರಾಟ ನಡೆಸಿ ದೊಡ್ಡ ಹೆಸರು ಪಡೆದರಲ್ಲವೇ? ಮತ್ತೆ ನಮ್ಮ ದೇಶಕ್ಕೆ ಯಾವಾಗ ಬಂದರಣ್ಣಾ!"

"ಗಾಂಧಿ ಅಜ್ಜನ ಜೀವನ ಸಾಮಾನ್ಯ ಇಪ್ಪತ್ತು ವರ್ಷಗಳ ಕಾಲ ದಕ್ಷಿಣ ಆಫ್ರಿಕದಲ್ಲಿ ಅಲ್ಲಿನ ಭಾರತೀಯರ ಸೇವೆಗಾಗಿ ಸಂದಿತು. ಅವರು ಕನಸಿನಲ್ಲೂ ಎಣಿಸದಂಥಾ ಮಹಾ ಕಾರ್ಯಗಳನ್ನು ಗಾಂಧಿ ಅಜ್ಜನ ಮುಂದಾಳುತನದಲ್ಲಿ ಸಾಧಿಸಿಕೊಂಡರು. ತಾನು ತನ್ನ ದೇಶದಲ್ಲಿ ದೇಶಕ್ಕಾಗಿ ದುಡಿಯಬೇಕೆಂದು ಮೊದಲೇ ಅವರಿಗೆ ಆಸೆಯಿತ್ತಲ್ಲವೇ?"

"ಆದರೆ ಸ್ವದೇಶಕ್ಕೆ ಯಾವಾಗ ಮರಳಿ ಬಂದರು?"

"ಹಿಂದೆಯೇ ಹೇಳಿದ್ದೆನಲ್ಲವೇ?"

"ಹಾಂ ನೆನಪಾಯಿತು ಸಾವಿರದ ಒಂಬೈನೂರ ಹದಿನಾಲ್ಕರ ತನಕ ಅಲ್ಲಿದ್ದರು ಅಲ್ಲವೇ?"

"ಹೌದು; 1915ನೇ ಇಸವಿಯಲ್ಲಿ ಅವರು ಹಿಂತಿರುಗಿದರು. ದಕ್ಷಿಣ ಆಫ್ರಿಕದಲ್ಲಿ ಗಾಂಧೀಜಿ ಗೈದ ಸಾಹಸ ಕೃತ್ಯಗಳಿಂದಾಗಿ ಬೋಅರ್ ಮತ್ತು ಜೂಲ್ ಜನಾಂಗದವರು ಅವರನ್ನು ತಮ್ಮ ಬಂಧುವೆಂದೇ ಪರಿಗಣಿಸುತ್ತಿದ್ದರು. ಅವರನ್ನು ಕಳುಹಿ ಕೊಡಲು ಅವರಿಗೆ ತುಂಬಾ ಕಷ್ಟವೇ ಆಯಿತು. ಆದರೆ ನಮ್ಮಜ್ಜ ಇಲ್ಲಿ ಬಂದು ಮಾಡತಕ್ಕ ಕೆಲಸವಿದ್ದಿತು"

"ನಮ್ಮಜ್ಜನಿಗೆ ಎಷ್ಟು ಗೌರವ ಸಂಭಾವನೆ ದೊರೆಯಿತೋ ಏನೋ, ಎಷ್ಟು ಸಭೆ ನೆರವೇರಿಸಿದರೋ?"

"ಆಪ್ತನ ಅಗಲು, ದುಃಖವನ್ನು ನೀಡದೇ? ಗಾಂಧೀಜಿಯನ್ನು ಕಳುಹಿ ಕೊಟ್ಟರು. ಮನ್ನಣೆ ಎಷ್ಟು ದೊರೆಯಿತೋ ಅದರ ಗಣನೆ ಯಾರಿಗೆ? ನಮ್ಮಜ್ಜ ಸೇವೆಗೆ ಹೊರಟರು. ಇಷ್ಟರಲ್ಲೇ ಯುರೋಪಿನಲ್ಲಿ ಪ್ರಥಮ ಮಹಾಯುದ್ಧವು ಪ್ರಾರಂಭವಾಯಿತು."

"ಈ ಬಾರಿಯೂ ಗಾಂಧಿ ಅಜ್ಜ ದಳ ಸ್ಥಾಪನೆ ಮಾಡಿದರೇ?"

"ಮಾಡದೆ ಇರುತ್ತಾರೇನು?"

"ಸೇವೆ ಎಂದರೆ ಸಾಕು ಗಾಂಧಿ ಅಜ್ಜನಿಗೆ ಮತ್ತೇನೂ ಬೇಡ."

"ಮಹಾತ್ಮರ ದೃಷ್ಟಿಯೇ ಬೇರೆ. ನಮ್ಮ ಕುರುಡು ದೃಷ್ಟಿಯೇ ಬೇರೆ. ನಮ್ಮ ಕಣ್ಣು ಕುರುಡು ಕಣ್ಣು ತಮ್ಮಾ! ಅವರ ದೃಷ್ಟಿ ಸತ್ಯ. ನಮ್ಮದು ಮಿಥ್ಯ. ಅವರ ದೃಷ್ಟಿ ಸತ್ಯ ಸೌಂದರ್ಯವನ್ನು ಕಾಣುತ್ತಿದೆ. ಭಾರತಕ್ಕೆ ಗಾಂಧೀಜಿ ಮರಳಿದರು."

"ಅಬ್ಬ ಹೇಗೂ ನಮ್ಮ ದೇಶಕ್ಕೆ ಬಂದರಲ್ಲವೇ?"

"ಬಂದು ಸುಮ್ಮಗಿದ್ದರೇ?"

"ನಮ್ಮಜ್ಜ ಸುಮ್ಮಗಿರುವುದುಂಟೇನಣ್ಣಾ!"

---

— ೬ —

"ತಮ್ಮಾ ಇತ್ತ ಭಾರತಕ್ಕೆ ಒಬ್ಬರು ಮುಂದಾಳುಗಳ ಅಗತ್ಯವಿತ್ತು. ದಕ್ಷಿಣ ಆಫ್ರಿಕದಿಂದ ಹಿಂತಿರುಗಿದ ಅವರಿಗೆ ಇಲ್ಲಿ ಸಂಭ್ರಮದ ಸ್ವಾಗತವೇ ದೊರೆಯಿತು. ಸಹನೆಯಿಂದಿದ್ದು ಬ್ರಿಟಿಷರೊಡನೆ ಹೋರಾಡಿ ಭಾರತ ವನ್ನು ಸ್ವತಂತ್ರ ರಾಷ್ಟ್ರವನ್ನಾಗಿ ಮಾಡಬೇಕೆಂಬುದೇ ಅವರ ಆಸೆಯಾ ಗಿತ್ತು. ಹಿಂದೂದೇಶಕ್ಕೆ ಬಂದವರೇ ಒಂದು ಆಶ್ರಮ ತೆರೆಯಬೇಕೆಂದು ಯೋಚಿಸಿದರು.

"ಎಂಥಾ ಆಶ್ರಮ?"

"ಅದೇ ಗಾಂಧೀಜಿಯ ಸತ್ಯಾಗ್ರಹ ಆಶ್ರಮ. ಬುನಾದಿ ಶಿಕ್ಷಣಕ್ಕೆ ಕಾರಣ ಗಾಂಧೀಜಿಯಲ್ಲವೇ?"

"ಓಹೋ ತಿಳಿಯಿತು. ಸ್ವತಂತ್ರ ಜೀವನಕ್ಕೆ ಶಿಕ್ಷಣ ಕೊಡುವ ಆಶ್ರಮ ಅಲ್ಲವೇ?"

"ಸರಿ. ಮಹಾತ್ಮಾ ಗಾಂಧೀಜಿ ಅನೇಕ ಶೋಧನೆಗಳನ್ನು ನಡೆಸು ತ್ತಿದ್ದರೆಂದು ಹೇಳಿದ್ದೆನಲ್ಲವೇ? ಅದರಿಂದಲಾಗಿಯೇ ಈ ಯೋಚನೆ ಗಾಂಧಿ ಯವರಲ್ಲುಂಟಾಯಿತು. ಅಲ್ಲಿ ಮಕ್ಕಳಿಗೂ ದೊಡ್ಡವರಿಗೂ ನೂಲುವು ದಕ್ಕೂ ನೇಯುವುದಕ್ಕೂ ಕೈಗಾರಿಕೆ ಮಾಡುವುದಕ್ಕೂ ಯೋಗ್ಯ ಶಿಕ್ಷಣ ವನ್ನು ಕೊಡಲಾಗುತ್ತಿತ್ತು. ಆಶ್ರಮ ಎಂದರೆ ಅದು ಇಂದಿನ ಶಾಲೆ ಗಳಂಥಾ ಶಾಲೆಯಲ್ಲ. ಅಲ್ಲಿ ಕುರ್ಚಿ ಬೆಂಚುಗಳಿಲ್ಲ, ಹಂಚು ಹೊದಿಸಿದ ಮಾಡು ಅದಕ್ಕಿಲ್ಲ. ಇಂದಿನ ಶಿಕ್ಷಣದಲ್ಲಿ ಗಾಂಧೀಜಿಗೆ ವಿಶ್ವಾಸವಿರಲಿಲ್ಲ."

"ಆದರೆ ಮಕ್ಕಳು ಶಾಲೆಗೆ ಹೋಗುವುದು ಬೇಡ ಎನ್ನುತ್ತಿದ್ದರೇ?"

"ಥಟ್ಟನೆ ವಿಪರೀತಾರ್ಥವನ್ನೇ ಕಲ್ಪಿಸಿಕೊಳ್ಳುತ್ತಿರುವೆಯಲ್ಲಾ ತಮ್ಮಾ! ಇಂದಿನ ಓದು ಮನುಷ್ಯನನ್ನು ದಾಸ್ಯವೃತ್ತಿಗೆ ಮುನ್ನಡೆಸುತ್ತಿದೆ. ಬೇಕಾದ ಜೀವ ಅನುಭವವನ್ನೂ ಕೊಡುವುದಿಲ್ಲ ಎಂದು ಅವರು ಮನಗಂಡಿದ್ದರು. ತಕ್ಕ ಬದಲಾವಣೆಯನ್ನು ಬಯಸಿದರೇ ಹೊರತು ಶಾಲೆಗೆ ಹೋಗುವುದು ಬೇಡ ಎಂದು ಬಲ್ಲವರಾದ ನಮ್ಮಜ್ಜ ಹೇಳುವರೇ?"

"ಅಣ್ಣಾ! ತಪ್ಪಿದೆ."

"ನಿನ್ನಲ್ಲಿ ತಪ್ಪನ್ನು ಯಾರು ಕೇಳಿದರು. ದಿನನಿತ್ಯ ದೇವರ ಪ್ರಾರ್ಥನೆ ಆಶ್ರಮದಲ್ಲಿ ಬೆಳಗ್ಗೂ ಸಂಜೆಯೂ ನಡೆಯುತ್ತಿತ್ತು. ನಾವು ನಮ್ಮ ನಾಗರಿಕತೆಯನ್ನು ಮರೆತಿದ್ದೇವೆ. ಅನ್ಯರ ಸಾಂಪ್ರದಾಯಕ್ಕೆ ಮರುಳಾಗಿದ್ದೇವೆ. ಇದರಿಂದಲಾಗಿ ಅದೂ ಇದೂ ಎರಡೂ ಇಲ್ಲದ ತಬ್ಬಲಿಗಳಾಗಿದ್ದೇವೆ ಎಂದು ಗಾಂಧೀಜಿ ಹೇಳುತ್ತಿದ್ದರು."

"ಆದರೆ ನಮ್ಮ ದೇಶದ ಮಕ್ಕಳ ರೀತಿ ನೀತಿ ತಿದ್ದಲು ಶಾಲೆ ಏರ್ಪಡಿಸಿದರೇ?"

"ಹೌದು. ತಿಳಿವಿಗಾಗಿ ಉಳ್ಳುದು ವಿದ್ಯೆ. ವಿದ್ಯಾಭ್ಯಾಸದಿಂದ ಅಕ್ಷರ ಜ್ಞಾನವನ್ನು ಪಡೆದರೆ ಸಾಲದು—ವಿವೇಕವನ್ನು ಪಡೆದು ಅಂದವಾಗಿ ಸ್ವತಂತ್ರವಾಗಿ ಜೀವನ ನಿರ್ವಹಣ ಮಾಡುವುದಕ್ಕೆ ಕಲಿಯಬೇಕು; ನಮ್ಮ ಮಕ್ಕಳಲ್ಲಿ ಆದರ್ಶ ಭಾವನೆಗಳು ಒಡಮೂಡಬೇಕು ಎಂದು ಅವರ ಆಸೆಯಾಗಿತ್ತು."

"ದಿನದಿನಕ್ಕೂ ಹೊಸ ಹೊಸ ಯೋಚನೆಯೇ ಗಾಂಧಿ ಅಜ್ಜನಲ್ಲಿ. ಈ ಯೋಚನೆಗಳೆಲ್ಲಾ ಎಲ್ಲಿಂದ ಹೇಗೆ ಬರುತ್ತವೋ?"

"ತನ್ನ ಅನುಭವದಿಂದ ಬಂದವು. ಭಾರತದ ಸ್ವಾತಂತ್ರ್ಯಕ್ಕಾಗಿ ಸತ್ಯಾಗ್ರಹ ಹೂಡಬೇಕು, ಬಹಳ ಪರಿಶ್ರಮ ವಹಿಸಬೇಕು ಎಂದು ಇದಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನೆಲ್ಲಾ ದಕ್ಷಿಣ ಆಫ್ರಿಕದಲ್ಲೇ ಮಾಡಿಕೊಂಡರು. ಗಾಂಧೀಜಿಯಿಂದ ಅಹಮದಾಬಾದಿನ ಸಮೀಪ ತೆರೆಯಲಾದ ಈ ಆಶ್ರಮವೇ ಸತ್ಯಾಗ್ರಹ ಆಶ್ರಮ ಎಂದು ಖ್ಯಾತಿಪಡೆಯಿತು"

"ಇಲ್ಲಿ ಸತ್ಯಾಗ್ರಹ ಹೂಡಬೇಕೆಂದು ಅಲ್ಲೇ ಯೋಚಿಸಿದ್ದರೇನಣ್ಣಾ!"

"ಅದರ ವಿನಾ ಬೇರೆ ಯಾವ ಉಪಾಯದಿಂದಲೂ ಬ್ರಿಟಿಷರನ್ನು ಬಗ್ಗಿಸುವುದು ಅಸಾಧ್ಯವೆಂದು ಅವರು ಅಂದೇ ಮನಗಂಡಿದ್ದರು. ಭಾರತಕ್ಕೆ ಮರಳಿದವರು ಇಲ್ಲಿನ ಜನರನ್ನು ಹುರಿದುಂಬಿಸಿ ಸತ್ಯಾಗ್ರಹಕ್ಕೆ ಅಣಿಯಾಗಬೇಕಲ್ಲವೇ?"

"ಎಷ್ಟು ದೀರ್ಘಾಲೋಚನೆ ನಮ್ಮಜ್ಜನದು?"

"ಮತ್ತೆ ಒಂದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವುದೆಂದರೆ ಬಹಳ ಸಣ್ಣ ಕೆಲಸವೇನು? ತನ್ನ ಮಾತೃಭೂಮಿಯ ಸೋದರಸೋದರಿಯರನ್ನು ಜಾಗೃತಿಗೊಳಿಸಿ ಮುನ್ನಡೆಸುವುದೆಂದರೆ ಸಾಮಾನ್ಯ ಕೆಲಸವೇ? ಒಂದು ಮನೆಯನ್ನು ಸರಿಯಾಗಿ ನಡೆಸಿಕೊಳ್ಳಲಾರದೆ ಮನೆಯ ಯಜಮಾನ ಬಹು ಕಷ್ಟ ಪಡುತ್ತಾನೆ. ಹೀಗಿರುವಾಗ—ವಿವೇಕವಿಲ್ಲದೆ ಮಹಾತ್ಮರು ಇಂಥಾ ಕೆಲಸಕ್ಕೆ ನುಗ್ಗುವರೇ? ನಾವು ದೇಶಕ್ಕಾಗಿ ಜೈಲಿಗೆ ಹೋಗೋಣ ಎಂದರೆ ಎಲ್ಲರೂ ಒಪ್ಪುವರೇನು?"

"ಸರಿಸರಿ. ಅಷ್ಟು ವಿಶಾಲ ಭಾವನೆ ನಮ್ಮವರಲ್ಲಿ ಎಂತು ಉಂಟಾಗಬೇಕು. ಗಾಂಧೀಜಿಯ ಹೆಜ್ಜೆಹೆಜ್ಜೆಯೂ ಅಷ್ಟು ಗಟ್ಟಿಯಾಗಿ ಇರಿಸಲಾದ ಹೆಜ್ಜೆ. ಆದರೆ ಅಲ್ಲಿನ ಶಾಲಾ ಮಕ್ಕಳಿಗೆಲ್ಲಾ ಈ ರೀತಿಯ ಬೋಧನೆ ಕೊಟ್ಟರೇ?"

"ಸ್ವಾವಲಂಬನವನ್ನು ಕಲಿಸುವುದೇ ಈ ಶಾಲೆಯ ಮುಖ್ಯೋದ್ದೇಶ. ಮನುಷ್ಯನು ತನ್ನ ಎಲ್ಲಾ ಕೆಲಸಗಳನ್ನು ತಾನು ನಿರ್ವಹಿಸಲು ಕಲಿಯಬೇಕು. ಅನ್ಯರಿಗಾಗಿ ಸೇವೆ ಸಲ್ಲಿಸಬೇಕು ಎಂಬ ತತ್ವವನ್ನು ಅಲ್ಲಿ ಬೋಧಿಸುತ್ತಿದ್ದರು. ದೇವರೆಂದರೆ ಗಾಂಧೀಜಿಗೆ ಅಚಲ ವಿಶ್ವಾಸ ತಾನೆ? ದೇವರನ್ನು ನಂಬಿ ಸತ್ಯ ಧರ್ಮಪಾಲನೆಗಳಿಂದ ಮಾನವಜೀವನ ಪಾವನಗೊಳ್ಳಬೇಕು ಎಂಬುದೇ ನಮ್ಮಜ್ಜನ ಮಹದಾಸೆ."

"ಆದರೆ ಸತ್ಯಾಗ್ರಹಕ್ಕೆ ಎಂದು ಪ್ರಾರಂಭಿಸಿದರು?"

"ತಡೆ ಅವಸರಬೇಡ. ಬನ್ನಿರಿ ಹೊರಡೋಣ ಎಂದು ಆಟಕ್ಕೆ ಕರೆದಂತೆ ಕರೆದರೆ ಕಷ್ಟವಾದ ಈ ಕೆಲಸಕ್ಕೆ ಎಲ್ಲರೂ ಮುಂದೆ ಬರುವರೇನು? ಜನರಿಗೆ ತನ್ನಲ್ಲಿ ವಿಶ್ವಾಸವನ್ನು ಹುಟ್ಟಿಸಿ ಅವರು ನಾಯಕನನ್ನಾಗಿ ಮಾಡಿಕೊಳ್ಳದ ವಿನಾ ಈ ಕೆಲಸ ಮುಂದುವರಿಯುವುದಾದರೂ ಹೇಗೆ? ತಾನು ಅನ್ನಾಹಾರಗಳನ್ನು ಬಿಟ್ಟು ಉಪವಾಸ ಕುಳಿತು ಸತ್ಯಾಗ್ರಹ ಸಾಧಿಸುವುದಕ್ಕೆ ಗಾಂಧೀಜಿ ದಕ್ಷಿಣ ಆಫ್ರಿಕದಲ್ಲೇ ಕಲಿತಿದ್ದರು?"

"ಅಲ್ಲಿ ಉಪವಾಸ ಮಾಡಿದ್ದರೇ?"

"ಹೌದು, ತಕ್ಕ ಎಲ್ಲಾ ಅಭ್ಯಾಸಗಳನ್ನೂ ಅಲ್ಲಿ ಮಾಡುವುದಕ್ಕೆ ಯತ್ನಿಸಿದರು."

“ಆದರೆ ಅದನ್ನು ನನಗೆ ಹೇಳಲೇ ಇಲ್ಲ.”

“ಜೈಲಿನೊಳಗೆ ಹೇಗೆ ಜೀವನ ಸಾಗುವುದೋ ಅಂತೆಯೇ ಜೀವನ ವನ್ನು ಸಾಗಿಸುವುದಕ್ಕೆ ಅವರು ಅಲ್ಲಿಯೇ ತೊಡಗಿದರು.”

“ಆದರೆ ಗಾಂಧಿ ಅಜ್ಜನ ಮನೆ ಜೈಲು ಎರಡೂ ಒಂದೇ ಹಾಗೆಯೇ ಸರಿ.”

“ತಮ್ಮಣ್ಣಾ! ಜೈಲು ಎಂದು ತಿಳಕೊಂಡರೆ ಹಾಗೆಯೇ ಸರಿ. ಆದರೆ ಮೆಚ್ಚಿದವನಿಗೆ ಅದೇ ಬಹಳ ಇಷ್ಟವಾಗಬಹುದು. ಎಲ್ಲಾ ಜನರು ಒಂದೇ ತಂದೆಯ ಮಕ್ಕಳ ಹಾಗೆ ಅನ್ಯೋನ್ಯ ಮಮತೆಯಿಂದಿದ್ದು ಜೀವನ ಮಾಡಿ ಸ್ವತಂತ್ರವಾಗಿ ಬಾಳುವುದಕ್ಕೆ ಅಲ್ಲಿ ಕಲಿತುಕೊಳ್ಳುತ್ತಾರಲ್ಲವೇ? ಆದ್ದರಿಂದ ವಿವೇಕಶಾಲಿಗಳಿಗಿದು ಹಾಗೆ ತೋರದು.”

“ಅಣ್ಣಾ! ಆದರೆ ನನಗೆ ವಿವೇಕ ಇಲ್ಲವೇ?”

“ತಮ್ಮಾ! ನಾನು ಹಾಗೆ ಎಂದಿಲ್ಲ ತಾನೆ? ಶಾಲೆಗೆ ದಿನ ನಿತ್ಯಹೋಗು ವುದು; ಕ್ಲಾಸಿನಲ್ಲಿ ಕುಳಿತುಕೊಳ್ಳುವುದು, ಅಧ್ಯಾಪಕರ ಅಂಕೆಯಲ್ಲಿರು ವುದು; ಇದೆಲ್ಲಾ ಕೆಲವರಿಗೆ ಬೇಸರ ತರುವುದಿಲ್ಲವೇ? ಶಾಲೆಗೆ ಯಾವಾಗ ರಜೆ ಸಿಕ್ಕುವುದಿಲ್ಲ ಎಂದು ಕಾಯುವ ಮಕ್ಕಳಿರುತ್ತಾರಲ್ಲವೇ? ಅದಕ್ಕೆ ವಿರೋಧವಾಗಿ ಶಾಲೆ ಇಲ್ಲದಿದ್ದರೆ ಬಹಳ ಬೇಸರವೇ ಆಗುತ್ತದೆ-ಎಂದು ಹೇಳುವ ವಿದ್ಯಾರ್ಥಿಗಳೂ ಇರುತ್ತಾರಲ್ಲವೇ? ಅದು ವಿದ್ಯಾರ್ಥಿಗಳ ಮನೋಧರ್ಮವನ್ನು ಹೊಂದಿಕೊಂಡಿರುತ್ತದೆ.”

“ಅಣ್ಣಾ! ನನಗೆ ಶಾಲೆ ಇಲ್ಲದ ದಿನ ಬಹಳ ಬೇಸರವಾಗುತ್ತದೆ. ಪಾಠ ಓದಿ ಆದ ಮೇಲೆ ಏನಾದರೂ ಕೆಲಸಮಾಡುತ್ತೇನೆ, ಮತ್ತೂ ಬೇಸರವಾದರೆ ನನ್ನಣ್ಣ ನೀವು ಇದ್ದೀರಲ್ಲಾ!”

“ಹೌದು ಕತೆ ಹೇಳುವ ನಾನೊಬ್ಬ ನಿನ್ನ ಬೇಸರ ಕಳೆಯುವುದಕ್ಕೆ ಅಲ್ಲವೇ? ಆದರೆ ನಾನು ನಿನಗಿನ್ನು ಕತೆ ಹೇಳುವುದಿಲ್ಲ; ನೀನು ನನಗೆ ಕತೆ ಹೇಳಬೇಕು. ನನಗೂ ಬೇಸರವಾಗುವುದಿಲ್ಲವೇ?”

“ಅಣ್ಣಾ! ಹಾಗೆಲ್ಲಾ ಹೇಳಬಾರದು. ತಮ್ಮನಿಗೇನು ಗೊತ್ತು? ನನ್ನಣ್ಣ ಬುದ್ಧಿವಂತ ಅಲ್ಲವೇ? ನನಗೆ ಈ ಮುದ್ದು ಕತೆಯನ್ನು ಹೇಳಲೇ ಬೇಕು.”

"ತಮ್ಮಾ! ನೀನು ಹೊಗಳಿಕೆ ಹಾಕುವುದರಲ್ಲಿ ಬಲು ಜಾಣ. ಅಣ್ಣ ನನ್ನು ಎಷ್ಟು ಬೇಕೋ ಅಷ್ಟು ಹೊಗಳುತ್ತಿಯಲ್ಲವೇ? ಅಣ್ಣ ಗಾಳಿ ಯೂದಿದರೆ ಉಬ್ಬುವ ರಬ್ಬರ್ ಚೆಂಡು ಎಂದು ಭಾವಿಸಿದೆಯಾ?"

"ನೀವು ಏನು ಬೇಕಾದರೂ ಹೇಳಿರಿ. ಆದರೆ ನನ್ನಣ್ಣ ಮಾತ್ರ ಅಂಥವರಲ್ಲ ಬಹಳ ಒಳ್ಳೆಯವರು."

"ಅದಕ್ಕೆ ನಾನು ಮಾತ್ರ ಒಪ್ಪಲಾರೆ."

"ಒಪ್ಪದಿದ್ದರೆ ನಾನೇನು ಮಾಡಬೇಕು. ನನ್ನ ವಿಶ್ವಾಸ ಮಾತ್ರ ಎಂದಿಗೂ ಹಾಳಾಗಲಾರದು ತಾನೇ?"

"ತಮ್ಮಾ! ನೀನು ಚುರುಕಾಗಿದ್ದಿ. ನಾನು ನಿನಗೆ ಕತೆ ಹೇಳುವುದು ಬಿಟ್ಟು ಜಗಳಾಡಿದರೆ ಹೇಗೆ?"

"ಚಿಂತಿಲ್ಲಣ್ಣಾ! ಜಗಳ ಮಾಡುತ್ತಾ ಕತೆ ಹೇಳಿರಿ. ಎರಡು ಕೆಲಸ ಗಳನ್ನು ಒಂದಿಗೆ ಮಾಡುವವ ನನ್ನಣ್ಣ ಎಂದು ನಾನು ಮತ್ತೂ ಹೊಗಳು ತ್ತೇನೆ."

"ಸಾಕು! ಸಾಕು ಹೊಗಳು ಭಟ್ಟಾ! ಮುಂದಿನ ಕತೆ ಹೇಳುತ್ತೇನೆ. ಆಶ್ರಮ ಮಾಡಿದರು. ಎಲ್ಲರೂ ಒಂದೇ ರೀತಿಯಲ್ಲಿ ಇರಬೇಕಲ್ಲವೇ? ಬೇರೆ ಬೇರೆ ಜಾತಿಯವರು ಒಂದೇ ಮನೆಯಲ್ಲಿರುವ ಅಣ್ಣತಮ್ಮಂದಿರ ಹಾಗೆ ಅಲ್ಲಿ ಕಾಲ ಕಳೆಯಬೇಕಿತ್ತು. ಸಂಪ್ರದಾಯ ಶರಣರು ಒಪ್ಪುತ್ತಾ ರೇನು?"

"ಆದರೆ ಗಾಂಧೀಜಿಗೆ ಬಹಳ ಕಷ್ಟವಾಯಿತೇ?"

"ಗಾಂಧೀಜಿಗೆ ಕಷ್ಟವೆಂಬುದೂ ಇದೆಯೇನು?"

"ಹಾಗಲ್ಲ! ಅಣ್ಣಾ ಅಲ್ಲಿ ಅವರು ಅನೇಕರಿಂದ ನಿಂದೆಗೆ ಪಾತ್ರ ರಾದರೇ? ಅವರ ಈ ಕೆಲಸವನ್ನು ಎಲ್ಲರೂ ವಿರೋಧಿಸಿದರೇ ಎಂದು ಕೇಳಿದೆ."

"ಬೇರೆ ಬೇರೆ ಜಾತಿಯವರೊಂದಿಗೆ ಒಡನಾಟ ಬೆಳೆಸಿ ಇರುವುದಕ್ಕೆ ಎಲ್ಲರಿಂದಲೂ ಅಸಾಧ್ಯ ತಾನೆ? ವಿಶಾಲ ದೃಷ್ಟಿಯುಳ್ಳವರಿಂದ ಮಾತ್ರ

ಆದು ಸಾಧ್ಯವಾದೀತು. ಉಚ್ಚ ಜಾತಿಯವರೆಂದು ಕರೆಯುವ ಮಂದಿಗಳು ಯಾರಿದ್ದಾರೋ ಅವರು ಅಂತ್ಯಜರೊಡನೆ ಇರುವುದಕ್ಕೆ ಸಮ್ಮತಿ ಸೂಚಿಸುವರೇನು? ಇಂಥಾ ಕಷ್ಟ ಅವರಿಗೆ ಬಂದಿರಬಹುದು. ಆದರೆ ಅದನ್ನು ದೂರೀಕರಿಸುವಷ್ಟು ಶಕ್ತಿಸಾಮರ್ಥ್ಯ ಗಾಂಧಿಯವರಲ್ಲಿ ಇದ್ದೇ ಇತ್ತಷ್ಟೆ."

"ಅಣ್ಣಾ! ಗಾಂಧೀಜಿಯ ತತ್ವಪ್ರಯೋಗ ಎಲ್ಲವೂ ಹೊಸತೆ. ಎಲ್ಲರೂ ಒಂದೇ ಎಂಬ ಅವರ ದಿವ್ಯತತ್ವವನ್ನು ಪ್ರಚಾರಪಡಿಸಲು ಒಳ್ಳೆಯ ಹಾದಿ ಕಂಡುಹಿಡಿದರಲ್ಲವೇ?"

"ತಮ್ಮಾ! ಈಗ ಆಶ್ರಮದ ಸುದ್ದಿ ಅಲ್ಲಿಗಿರಲಿ. ಗಾಂಧಿ ಅಜ್ಜ ಚಂಪಾರಣ್ಯಕ್ಕೆ ಸಾಗಿ ಅಲ್ಲಿ ಏನೆಲ್ಲಾ ಮಾಡಿದರು ಎಂದು ಹೇಳಬೇಡವೇ?"

"ಹೂಂ ಹೇಳಿರಿ. ಶ್ರೀರಾಮ ಕಾಡಿಗೆ ಹೋದ ಹಾಗೆ ಮಹಾತ್ಮಾ ಗಾಂಧಿಯವರು ಅಂದರೆ ಅವರ ಭಕ್ತರೂ ಕೂಡ ಕಾಡಿಗೆ ಹೋದರು ಅಲ್ಲವೆ?"

"ತಮ್ಮಣ್ಣಾ! ವನವಾಸ ಮಾಡುವುದಕ್ಕೆ ನಮ್ಮಜ್ಜ ಕಾಡಿಗೆ ಹೋಗಲಿಲ್ಲ."

"ತಿಳಿಯಿತು ಉದ್ಧಾರ ಮಾಡಲು ಹೋದರು. ಅಲ್ಲವೇ?"

"ಆದರೆ ನೀನೇ ಹೇಳು ನೋಡೋಣ."

"ಅಣ್ಣಾ! ಹಾಗೆಲ್ಲಾ ಕೋಪಿಸಬಾರದು. ಎಲ್ಲಿ ಹೋದರೂ, ಜನರ ಸೇವೆ ಮಾಡುವುದು ಜನರ ಉದ್ಧಾರ ಮಾಡುವುದು ಇದೇ ನಮ್ಮಜ್ಜನ ಕೆಲಸ ಆದ್ದರಿಂದ ಹಾಗೆಂದನು. ಅರಣ್ಯ ಎಂದರೆ ಕಾಡಲ್ಲವೇನಣ್ಣಾ?"

"ಅರಣ್ಯ ಎಂದರೆ ಕಾಡು ಹೌದು. ನಿನಗೆ ನಾನೀಗ ಶಬ್ದದ ಅರ್ಥ ಹೇಳಬೇಕೋ ಕತೆ ಕೇಳಬೇಕೋ,? "ಅಟವ್ಯರಣ್ಯಂ ವಿಪಿನಂ" ಎಂದು ಅಮರ ಶ್ಲೋಕ ಹೇಳಿ ಪಾಠಮಾಡಬೇಕೇ? ಒಂದು ನೋಟ್ಸು ಪುಸ್ತಕ ತಂದು ಅರ್ಥ ಬರೆ. ದೊಡ್ಡ ನಿಘಂಟೇ ತಯಾರಾಗಲಿ."

"ಆಯಿತು. ಆದರೆ ಅರಣ್ಯ ಎಂದರೆ ಕಾಡೇ? ಎಂದು ಇನ್ನು ಕೇಳುವುದಿಲ್ಲ?"

"ಆದರೆ?"

"ಆದರೆ, ಏನೂ ಇಲ್ಲ ಮುಂದಿನ ಕತೆ ಹೇಳಿರಿ ಎಂದು ಕೈ ಮುಗಿದು ಕೇಳಿಕೊಳ್ಳುತ್ತೇನೆ."

"ಕೈಮುಗಿದು ಉದ್ದಂಡ ನಮಸ್ಕರಿಸಿ, ನನ್ನಣ್ಣಾ! ಕತೆ ಹೇಳಿರಿ ಎಂದು ಕೇಳಿಕೊಳ್ಳುವೆಯಾ? ಆದರೆ ಮುಂದಿನ ಕತೆ ಪ್ರಾರಂಭಿಸುತ್ತೇನೆ. ಚಂಪಾರಣ್ಯ ಎಂದರೆ ಜನಕರಾಜನ ರಾಜ್ಯ. ಗಾಂಧೀಜಿ ಅಲ್ಲಿನ ನೀಲಿ ತೋಟದ ಕೆಲಸಗಾರರ ದುಃಸ್ಥಿತಿಯನ್ನು ನೋಡುವುದಕ್ಕಾಗಿ ಹೋದರು. ಅಲ್ಲಿರುವ ಮಂದಿಗೆ ಬಿಳಿ ಜನರು ತುಂಬಾ ತೊಂದರೆ ಕೊಡುತ್ತಿದ್ದರು. ಬಡಮಂದಿ ಕ್ಷಾಮ ಪೀಡಿತರಾಗಿ ವಿಶೇಷವಾದ ಸಂಕಟಕ್ಕೊಳಗಾಗಿದ್ದರು. ಅವರ ದುಃಖ ನಿವಾರಣೆ ಮಾಡಬೇಕೆಂಬ ಉದ್ದೇಶದಿಂದಲೇ ಅಲ್ಲಿಗೆ ತೆರಳಿದರು."

"ಆ ಬಡ ರೈತರಿಗೆ ಎಂಥಾ ತೊಂದರೆ ಕೊಡುತ್ತಿದ್ದರಣ್ಣಾ!"

"ಅರಸನು ತನ್ನ ರಾಜ್ಯದ ಪ್ರಜೆಗಳಿಗೆ ಕಷ್ಟ ಬಂದರೆ ಅದನ್ನು ದೂರೀಕರಿಸುವುದಕ್ಕೆ ಯತ್ನಿಸಬೇಕಲ್ಲವೇ? ಆದರೆ ಬಿಳಿ ಜನಾಂಗದವರ ಕಾನೂನುಗಳೆಲ್ಲವೂ ವಿಚಿತ್ರವಾದವುಗಳು. ಅಲ್ಲಿನ ಜನರು ಕ್ಷಾಮ ತಲೆದೋರಿದ ರಿಂದ ಉಣ್ಣುವುದಕ್ಕೂ ಉಡುವುದಕ್ಕೂ ಇಲ್ಲದೆ ಬಹಳ ಕಷ್ಟ ಅನುಭವಿಸುತ್ತಿದ್ದರು. ರೈತರು ಈ ರೀತಿಯ ಕಷ್ಟವನ್ನು ಅನುಭವಿಸುತ್ತಿದ್ದರೂ ಸರಕಾರವು ಆ ಬಡವರಿಂದ ಬಲಾತ್ಕಾರವಾಗಿ ಕಂದಾಯವನ್ನು ವಸೂಲು ಮಾಡಲು ಯತ್ನಿಸುತ್ತಿತ್ತು."

"ಅಣ್ಣಾ! ಊಟಕ್ಕೆ ಇಲ್ಲದೆ ಕಷ್ಟಪಡುವ ಅವರಲ್ಲಿ ಸರಕಾರ ಒಂದಿಷ್ಟೂ ಕರುಣೆ ತೋರಲಿಲ್ಲವೇ?"

"ಅವರಿಗೆ ಹಣದ ಗುರುತು ಹೊರತು ಜನರ ಗುರುತು ಇದೆಯೇ? ಅವರು ಅವರ ಬಣ್ಣ, ಅವರ ಹಣದ ಆಸೆ, ಆಡಂಬರ ಇಷ್ಟರ ಹೊರತು ಆ ಜನರಿಗೆ ನಿಜವಾದ ನಾಗರೀಕತೆ ಎಂದರೆ ಏನು ಎಂದು ಗೊತ್ತು ಬೇಕು ತಾನೆ?"

"ಆದರೆ ಅವರು ನಮ್ಮನ್ನು ಕುರಿಗಳು ಎಂದು ಅನ್ನುತ್ತಿದ್ದರಲ್ಲವೇ?"

"ಹೌದು ಅವರು ಕುರಿಗಳು ಎನ್ನುವ ಹಾಗೆ ಮಾಡಿಕೊಂಡವರು ನಾವು. ಎಷ್ಟು ದೊಡ್ಡವರೇ ಇರಲಿ ತಪ್ಪು ಮಾಡಿದರೆ ಅವರನ್ನು ಸಣ್ಣವರೂ ಕೂಡ ಬೈಯುತ್ತಾರಲ್ಲವೇ? ನಾವು ನಮ್ಮ ತಿಳಿಗೇಡಿತನದಿಂದ ಬಿಕ್ಕಟ್ಟು ತಂದುಕೊಂಡು ನಮ್ಮ ತಲೆ ಜುಟ್ಟನ್ನು ಅನ್ಯರ ಕೈಗೆ ಕೊಟ್ಟಿದ್ದೆವು. ಅಂಥಾ ನಮ್ಮನ್ನು ಕುರಿಗಳು ಎಂದು ಹೇಳಿದ್ದರಲ್ಲಿ ತಪ್ಪೇನು? ಎಲ್ಲರೂ ಒಂದಾಗಿರ ಬೇಕು ಒಂದೇ ಬುದ್ಧಿಯಿಂದಿರಬೇಕು ಎಂದು ಗಾಂಧಿ ಅಜ್ಜ ಜೀವನ ಇಡೀ ಸಾರಿ ಕೊನೆಗೆ ಗುಂಡಿನೇಟಿಗೆ ಬಲಿಬಿದ್ದರೂ ನಾವು ನಮ್ಮ ಬುದ್ಧಿ ಬಿಟ್ಟಿದ್ದೇ ವೇನು? ನಮ್ಮ ಸ್ವಾರ್ಥ ನಮ್ಮಲ್ಲೇ ಇದೆ ತಾನೆ?"

"ಚಂಪಾರಣ್ಯದಲ್ಲಿ ಗಾಂಧೀಜಿ ಈ ಬಗ್ಗೆ ಏನು ಮಾಡಿದರು?"

"ಗಾಂಧೀಜಿ ಅಲ್ಲಿಗೆ ತಲಪಿದಾಗಲೇ ಪೋಲೀಸ್ ಸುಪರಿಂಟೆಂಡೆಂಟರು ಅಲ್ಲಿಂದ ತೊಲಗಬೇಕೆಂದು ಆಜ್ಞೆ ವಿಧಿಸಿದರು. ಆದರೆ ಅದಕ್ಕೆ ನಮ್ಮಜ್ಜ ಒಪ್ಪಲಿಲ್ಲ. ಈ ತಪ್ಪಿಗಾಗಿ ಗಾಂಧಿ ಅಜ್ಜನನ್ನು ಕರೆದು ವಿಚಾರಣೆ ನಡೆಸಿದರು"

"ಗಾಂಧಿ ಅಜ್ಜ ಹೋದಲ್ಲೆಲ್ಲಾ ಬಿಳಿಯರಿಗೆ ಕಣ್ಣು ಅಲ್ಲವೇನಣ್ಣಾ!"

"ಅದು ಹಾಗೆಯೇ ಅಲ್ಲವೇ? ಯಾವಾಗಲೂ ಕಳ್ಳನಿಗೆ ಶಂಕೆ ತಪ್ಪಿದ್ದಲ್ಲ. ಅನ್ಯಾಯ ಎಸಗುತ್ತಿರುವ ತಮಗೆ ವಿರೋಧವಾಗಿ ಎಲ್ಲಾದರೂ ಜನರನ್ನು ಹುರಿದುಂಬಿಸಿ ದಂಗೆ ಏಳಿಸಬಹುದೆಂಬ ಯೋಚನೆ ಅವರದು. ಅದಕ್ಕಾಗಿಯೇ ಉಳಿದ ಮಂದಿಯನ್ನು ಹಾಳುಮಾಡುವುದಕ್ಕಾಗಿಯೇ ಅವರು ಅರುವತ್ತು ಕಾನೂನುಗಳನ್ನು ಮಾಡುತ್ತಿದ್ದರು."

"ಕಾನೂನು ಜನರ ಹಿತಕ್ಕಲ್ಲವೇನಣ್ಣ?"

"ಕಾನೂನು ಜನರ ಹಿತಕ್ಕೆ ಅಲ್ಲ, ತಮ್ಮ ಹಿತಕ್ಕೆ ಎಂದು ಬಿಳಿಯರ ನಂಬುಗೆ. ಅವರ ಕ್ರಮವೆಲ್ಲವೂ ವಿಚಿತ್ರವಲ್ಲವೇ? ಅವರ ಅಧಿಕಾರ ನಡೆಸುವುದಕ್ಕಾಗಿ ಜನರ ರಕ್ತ ಹಿಂಡುವುದಕ್ಕಾಗಿ ಅವರು ಎಷ್ಟು ಬೇಕೋ ಅಷ್ಟು ಕಾನೂನುಗಳನ್ನು ಮಾಡುವುದರಲ್ಲಿ ಪ್ರವೀಣರು ಎನಿಸಿಕೊಂಡಿದ್ದರು"

"ಆದರೆ ನಮ್ಮಜ್ಜನ ವಿಚಾರಣೆ ಏನಾಯಿತು? ಗಾಂಧಿ ಅಜ್ಜನಿಗೆ ಶಿಕ್ಷೆ ವಿಧಿಸಿದರೇ?"

"ಗಾಂಧಿ ಅಜ್ಜ ಅವರ ತಡೆಗೆಲ್ಲಾ ಹೆದರುತ್ತಾರೇನು? ಅವರದು ಸತ್ಯ ಮಾರ್ಗ. ತನ್ನ ವಿಚಾರವನ್ನು ಅವರು ಮುಂದಿಟ್ಟರು. ತಾನು ತಮ್ಮ ಅಪ್ಪಣೆಯನ್ನು ಉಲ್ಲಂಘಿಸುವುದಿಲ್ಲವೆಂದೂ ಸೇವೆ ಮಾಡುವುದು ತನ್ನ ಕರ್ತವ್ಯವೆಂದೂ, ಬಡರೈತರ ಸೇವೆಮಾಡಲು ಬಂದವನಾದ್ದರಿಂದ ಹಾಗೆಯೇ ಹಿಂತಿರುಗುವವನಲ್ಲವೆಂದೂ, ಸರಕಾರದೊಡನೆ ನಿವೇದಿಸುವುದಕ್ಕೆ ಬಂದಿರುವೆನೆಂದೂ ಹೇಳಿಕೊಂಡರು. ಅಂತೂ ಬಿಳಿಯರು ಸೋಲಬೇಕಾಯಿತು"

"ಎಷ್ಟು ಜಾಣ ನಮ್ಮಜ್ಜ!"

"ವಿಶ್ವವೇ ನಮ್ಮಜ್ಜನ ಜಾಣ್ಮೆಗೆ ತಲೆದೂಗುತ್ತಿದೆ ಎಂದ ಮೇಲೆ ಅವರ ಜಾಣ್ಮೆಯನ್ನು ನಮ್ಮಂಥವರು ವರ್ಣಿಸುವುದಾದರೂ ಹೇಗೆ ತಮ್ಮಾ?"

"ಅಣ್ಣಾ! ಹೌದು ಗಾಂಧಿ ಅಜನ ಒಂದೊಂದು ಕತೆಯೂ ಹಾಗೆಯೇ ಸರಿ"

"ಗಾಂಧಿ ಅಜ್ಜನ ಕತೆ ಬಹಳ ವಿಚಿತ್ರವೇ. ಅವರು ಹೋದಲ್ಲಿ ಬಂದಲ್ಲಿ ನಡೆದಲ್ಲಿ ಎಲ್ಲಾ ಆದ ವಿಚಿತ್ರಕತೆಗಳನ್ನು ಹೇಳುತ್ತಾಹೋದರೆ ನಾಲ್ಕೈದು ರಾಮಾಯಣ ಭಾರತಗಳಿಗಿಂತಲೂ ದೊಡ್ಡದಾಗಬಹುದು. ಚಂಪಾರಣ್ಯದಲ್ಲಿ ಸರಕಾರದ ವಿರೋಧವಾಗಿ ರೈತರನ್ನು ಹುರಿದುಂಬಿಸಿ ಸತ್ಯಾಗ್ರಹ ಹೂಡುವುದಕ್ಕೆ ಬೋಧನೆ ಕೊಟ್ಟರು."

"ತಪ್ಪನ್ನು ತಿದ್ದುವುದಕ್ಕೆ ನಮ್ಮಜ್ಜ ಕಂಡುಹಿಡಿದ ಹೊಸ ಮಾರ್ಗವನ್ನು ಅಲ್ಲಿಯೂ ಪ್ರಯೋಗಕ್ಕೆ ತಂದರಲ್ಲವೇ?"

"ಹೌದು, ತಪ್ಪು ದಾರಿ ಹಿಡಿದು ವಿನಾಶದೆಡೆಗೆ ಸಾಗುತ್ತಿರುವ ಪ್ರಪಂಚವನ್ನೇ ಸರಿಯಾದ ಮಾರ್ಗಕ್ಕೆ ತರಲು ಮಹಾತ್ಮರು ಯತ್ನಿಸಿದರು. ನಮ್ಮಜ್ಜನಂಥಾ ಮಹಾಪುರುಷರು ಅದಕ್ಕಾಗಿಯೇ ಜನ್ಮವೆತ್ತುವರು. ಆದರೆ ಇಂಥಾ ಒಬ್ಬ ಮಹಾತ್ಮನ ಜನನ ಈ ತನಕ ಆಗಿರಲಿಲ್ಲ. ಆದುದರಿಂದಲೇ, ಲೋಕದ ತಂದೆ, ವಿಶ್ವದ ಗುರು, ಎಂದು ನಮ್ಮಜ್ಜನನ್ನು ಜನತೆ ಕರೆಯಬೇಕಾಯಿತು"

"ಆದರೆ ಚಂಪಾರಣ್ಯದಲ್ಲಿ ದೊಡ್ಡ ಸತ್ಯಾಗ್ರಹವೇ ನಡೆಯಿತೇನಣ್ಣಾ!"

“ಹೌದು, ಗಾಂಧೀಜಿಯ ಬೋಧನೆಯಂತೆ ಎಲ್ಲರೂ ಸತ್ಯಾಗ್ರಹ ಮಾಡಿದರು. ಸರಕಾರವು ಈ ಸತ್ಯಾಗ್ರಹವನ್ನು ನಿರ್ಮೂಲಗೊಳಿಸುವುದಕ್ಕೆ ಮಹಾಸಾಹಸ ಮಾಡಿತು. ಅನೇಕ ಕಾನೂನುಗಳನ್ನು ಜಾರಿಗೆ ತಂದಿತು. ಆದರೆ ಅದು ಫಲಕಾರಿಯಾಗಲಿಲ್ಲ. ಸತ್ಯಾಗ್ರಹ ಭಯಂಕರ ರೂಪ ತಾಳಿತು.”

“ಅಣ್ಣಾ! ಆದರೆ ಜನರು ಬಹಳ ಕಷ್ಟ ಅನುಭವಿಸಿದರೇ? ಎಲ್ಲರನ್ನೂ ಸೆರೆಮನೆಗೊಯ್ದರೇ?”

“ಸೆರೆಮನೆಗೊಯ್ಯುವುದೇನು ಹೊಸತು. ಜನರ ಮೇಲೆ ಗುಂಡಿನೇಟು ಬಿತ್ತು. ಲಾಠಿಯ ಪ್ರಹಾರವಾಯಿತು.”

“ಅಣ್ಣಾ! ಆದರೂ ಜನರು ಬಿಡಲಿಲ್ಲವೇ? ಬಹುಧೈರ್ಯಶಾಲಿಗಳೇ ಸರಿ.”

“ಧೈರ್ಯಶಾಲಿಗಳೆಂಬುದರಲ್ಲಿ ಸಂದೇಹವೇನು? ದೇಶದ ಹಾಗೂ ಜನತೆಯ ಶ್ರೇಯಸ್ಸನ್ನು ಅಪೇಕ್ಷಿಸುವ ಮಂದಿ ಪ್ರಾಣದ ಮೇಲೆ ಅಸೆಯಿಟ್ಟು ದುಡಿಯುವರೇನು? ಹುಟ್ಟಿದ ವ್ಯಕ್ತಿ ಒಂದಲ್ಲ ಒಂದು ದಿನ ಸಾಯಲೇಬೇಕು. ಬರಿದೆ ಸಾಯುವುದಕ್ಕಿಂತ ಈ ರೀತಿ ಸಾಯುವುದೇ ಮೇಲಲ್ಲವೇ?”

“ಮೇಲೆಂಬುದೆಲ್ಲಾ ನಿಜವಣ್ಣ! ಆದರೆ ಕಾರ್ಯರೂಪಕ್ಕೆ ಬಂದಾಗ ಸಾಮಾನ್ಯರೆಲ್ಲಾ ಹಿಂದುಳಿಯುತ್ತಾರಲ್ಲವೇ?”

“ಅದೇ. ಮೊದಲೇ ಎಂದಿದ್ದೇನಲ್ಲಾ! ಸಾಮಾನ್ಯ ವ್ಯಕ್ತಿಗಳೆಲ್ಲಾ ಅಸಾಮಾನ್ಯ ವ್ಯಕ್ತಿಗಳಾಗುವುದಿಲ್ಲವೆಂದು”

“ನೀವೆಂದುದೆಲ್ಲಾ ಸರಿಯಣ್ಣ. ಆದರೆ ನನಗೆ ಇದನ್ನೆಲ್ಲಾ ನೆನೆಯುವಾಗ ಎಲ್ಲವೂ ಅದ್ಭುತವಾಗಿ ಕಾಣುತ್ತಿದೆ.”

“ತಮ್ಮಾ! ನಿನಗೆ ಎಲ್ಲವೂ ಹಾಗೆಯೇ ಕಂಡೀತು. ನೀನೂ ಒಬ್ಬ ಅದ್ಭುತ ವ್ಯಕ್ತಿಯಲ್ಲವೇ?”

“ಅಣ್ಣಾ! ಅದೇಕೆ ತಮ್ಮನನ್ನು ತಮಾಷೆ ಮಾಡುತ್ತಿದ್ದೀರಿ?”

"ನಾನು ನನ್ನ ತಮ್ಮನನ್ನು ತಮಾಷೆ ಮಾಡುತ್ತೇನೇನು? ನಿನ್ನ ಹಾಗೆ ಅಣ್ಣನಿಗೆ ತಂಟೆಕೊಡುವ ತಮ್ಮಂದಿರು ಪ್ರಪಂಚದಲ್ಲಿ ಬಲು ವಿರಳ ಅಲ್ಲವೇ? ಆದ್ದರಿಂದಲೇ ಹಾಗೆಂದೆ."

"ಒಳ್ಳೆಯ ಅಣ್ಣಂದಿರಿದ್ದರೆ ಎಲ್ಲರೂ ತಂಟೆ ಕೊಡಬಹುದಣ್ಣಾ! ಆದರೆ ನಾನು ತಂಟೆ ಕೊಡುವುದರಿಂದ ನಿಮಗೆ ಬೇಸರವಾಗುತ್ತದೇನು?"

"ತಮ್ಮಣ್ಣಾ! ಹಾಗೆಣಿಸಬೇಡ. ನಿನ್ನ ತಂಟೆ ನನಗೆ ಸಂತೋಷವನ್ನೇ ನೀಡುತ್ತಿದೆ. ಅಣ್ಣ, ತಮ್ಮ, ಎಂದು ಬಾಯಿಮಾತಿನಿಂದ ಹೇಳಿಕೊಂಡರೆ ಸಾಲದು ತಮ್ಮಾ! ಅಣ್ಣ ತಮ್ಮ ಇಬ್ಬರೂ ಸದಾ ಒಂದೇ ಜೀವದ ಹಾಗಿರ ಬೇಕು"

"ಅಣ್ಣಾ! ಹಾಗೆಯೇ ಆಗಲಿ. ಆದರೆ ಚಂಪಾರಣ್ಯದ ಮಂದಿ ಗಾಂಧೀಜಿಯ ಉಪದೇಶದಂತೆ ಗುಂಡಿನೇಟಿಗೂ ಬೆದರಲಿಲ್ಲ ಅಲ್ಲವೇ? ಮತ್ತೇನಾಯಿತು?"

"ಹುಚ್ಚು ಸರಕಾರದ ದಬ್ಬಾಳಿಕೆಗೆ ಅಲ್ಲಿನ ರೈತರು ಬಗ್ಗಲಿಲ್ಲ. ಸರಕಾರವು ಎಷ್ಟು ಯತ್ನಿಸಿದರೂ ಎಲ್ಲವೂ ನಿಷ್ಫಲವಾಯಿತು. ಅವರನ್ನು ಸರಕಾರಕ್ಕೆ ಅಡಗಿಸಲು ಅಸಾಧ್ಯವಾದ ಕೆಲಸವಾಗಿ ಕಂದಾಯ ವಸೂಲು ಮಾಡುವ ಯೋಚನೆ ಬಿಟ್ಟುಬಿಟ್ಟಿತು"

"ಆದರೆ ರೈತರೇ ಗೆದ್ದರೇ?"

"ಹೌದು. ಆ ಬಳಿಕ ಗಾಂಧೀಜಿ ರೌಲತ್ ಆಕ್ಟಿನ ಬಗ್ಗೆ ಹೋರಾಡ ಬಯಸಿದರು. ಅದನ್ನು ನಿಷೇಧಿಸುವ ಬಗ್ಗೆ ಶಾಂತಿಯಿಂದಲೇ ಹರತಾಳ ಮುಖೇನ ಯತ್ನನಡೆಸಬೇಕೆಂದು ಬಗೆದರೂ ಜಲಿಯನ್ ವಾಲಾ ಬಾಗದ ಅತ್ಯಾಚಾರವು ಅವರನ್ನು ಅದಕ್ಕೆ ಬಿಡಲಿಲ್ಲ.

"ಅಂದರೆ ಅಲ್ಲಿ ಏನಾಯಿತಣ್ಣಾ?"

"ಜಲಿಯನ್‌ವಾಲಾ ಬಾಗಿನಲ್ಲಿ ತೋಟದ ಕೆಲಸಗಾರರಿಗಾದ ಅತ್ಯಾ ಚಾರವನ್ನು ವಿರೋಧಿಸುವ ಬಗ್ಗೆ ಸಾವಿರಾರು ಮಂದಿ ಕಿಕ್ಕಿರಿದು ಸಭೆ ಸೇರಿದ್ದರು. ಆ ತೋಟದ ಸುತ್ತಲೂ ಎತ್ತರವಾದ ಗೋಡೆಗಳಿದ್ದವು. ಅದಕ್ಕೆ ಒಳಗೆ ಹೋಗುವುದಕ್ಕೂ ಹೊರಗೆ ಬರುವುದಕ್ಕೂ ಒಂದೇ ಒಂದು

ಬಾಗಿಲಿದ್ದಿತು. ಅಲ್ಲಿಗೆ ಬ್ರಿಟಿಶ್ ಅಧಿಕಾರಿಯು ಸೈನ್ಯಸಮೇತನಾಗಿ ಬಂದು ಬಾಗಿಲಲ್ಲೇ ಮೆಶಿನ್‌ಗನ್ ಇರಿಸಿ ಗುಂಡಿನ ಸುರಿಮಳೆಗರೆಯುವಂತೆ ಆಜ್ಞೆಯಿತ್ತನು. ಬಡ ಕೆಲಸಗಾರರ ಪಾಡು ಏನೆನ್ನಲಿ"

"ಅಣ್ಣಾ; ಈ ರೀತಿ ಮನುಷ್ಯರನ್ನು ಕೊಲ್ಲುವುದೂ ಇದೆಯೇ?"

"ತಮ್ಮಾ! ಉಳಿದವರೂ ತಮ್ಮಂತೆ ಮನುಷ್ಯರೆಂಬ ಭಾವನೆ ಅವರಲ್ಲಿದ್ದರೆ ಹೀಗೆ ಮಾಡುತ್ತಾರೇನು?"

"ಅಣ್ಣಾ! ಬ್ರಿಟಿಷ್ ಅಧಿಕಾರಿಗಳಿಗೂ ದಾನವರಿಗೂ ನಿಜವಾಗಿಯೂ ಏನೂ ವ್ಯತ್ಯಾಸವಿಲ್ಲವೆಂದೇ ಹೇಳಬಹುದು."

"ಬಾಗಿಲ ಬಳಿ ಈ ರುದ್ರಸ್ವರೂಪಿಯಾದ ಯಂತ್ರವಿರಲು ಅವರೇನು ಮಾಡಲಿ. ಹೊರಬರಲು ಅಸಾಧ್ಯವಾಗಿ ತರುಣರು ವೃದ್ಧರು ಗಂಡಸರು ಹೆಂಗಸರು ಎಲ್ಲರೂ,-ಸಾವಿರಾರು ಮಂದಿ ಗುಂಡಿಗೆ ಆಹುತಿಯಾಗಬೇಕಾಯಿತು. ಶವಗಳ ರಾಸಿಯೇ ಬಿದ್ದಿತು"

"ಅಣ್ಣಾ! ನಮ್ಮಜ್ಜನಿಗೆಷ್ಟು ದುಃಖವಾಯಿತೋ ಏನೋ ಅವರು ನಿಜವಾಗಿಯೂ ಕರುಣಾಮೂರ್ತಿಯೇ ಅಲ್ಲವೇ? ಮಗುವಿನಂತೆ ಕಣ್ಣೀರಿಳಿಸಿ ಅತ್ತಿರಬಹುದು ನಮ್ಮಜ್ಜ."

"ತಮ್ಮಾ! ಈ ದುಃಖದಿಂದಲಾಗಿಯೇ ನಮ್ಮಜ್ಜ ತಮ್ಮ ಚಳವಳವನ್ನು ನಿಲ್ಲಿಸಬೇಕಾಯಿತು. ಎಲ್ಲಾ ಜನರನ್ನೂ ಈ ಗುಂಡಿಗೆ ಆಹುತಿಗೊಡುವುದಕ್ಕೆ ಪರಕೀಯರು ಹಿಂಜರಿಯುವರೇನು?"

"ಯಾರ ಮಕ್ಕಳು ಸತ್ತರೆ ಯಾರಿಗೇನಂತೆ ಎಂದು ಆಡುವ ಮಾತನ್ನು ಕೇಳಿದ್ದೇನಣ್ಣಾ! ಅದೇ ರೀತಿ ನಮ್ಮವರ ಗತಿಯಾಯಿತು! ಬಡವರ ಪಾಡು ಇದೇ ಅಲ್ಲವೇ?"

"ತಮ್ಮಾ! ಈ ದುರಂತ ದೇಶದ ಬಹುಮಂದಿಯನ್ನು ಕೆರಳಿಸಿತು. ಈ ತರುವಾಯ ಭಾರತದ ಸ್ತ್ರೀರತ್ನ ಸರೋಜಿನಿ ದೇವಿಯವರು ಕೂಡ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಂದಾದರು"

"ಅಣ್ಣಾ! ಭಾರತೀಯರನ್ನು ಪಶುವಿಗಿಂತಲೂ ಕೀಳಾಗಿ ತಿಳಿಯುತ್ತಿದ್ದರಲ್ಲವೇ?"

"ಹೌದು. ಸ್ವಾತಂತ್ರ್ಯ ಕಳೆಕೊಂಡವರ ಪಾಡು ಇದೇ ತಾನೆ? ಅಧಿಕಾರದರ್ಪ ಬಂದಾಗ ವಿವೇಕವಿಲ್ಲದಾಗುತ್ತಿದೆ. ಎಲ್ಲರೂ ತಮ್ಮ ಪಾಲಿಗೆ ಬಂದ ಸುಖವಿರಲಿ ದುಃಖವಿರಲಿ ಎರಡನ್ನೂ ಅನುಭವಿಸಬೇಕಾಗುತ್ತದಲ್ಲವೇ? ಗಾಂಧೀಜಿಗೆ ತುಂಬಾ ದುಃಖವೇನೋ ಆಯಿತು. ಆದರೂ ಮಾಡುವುದೇನು? ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕದ ವಿನಾ ಕ್ಷೇಮವಿಲ್ಲವೆಂದು ನಮ್ಮಜ್ಜನಿಗೆ ಖಚಿತವಾಗಿ ಹೋಗಿದ್ದಿತು."

"ನಮ್ಮಜ್ಜ ಆದರೆ ನಿರಾಶರಾಗಿ ಮತ್ತೇನು ಮಾಡಿದರಣ್ಣಾ!"

"ತನ್ನ ಧ್ಯೇಯದ ಗುರಿ ಮುಟ್ಟದೆ ಗಾಂಧಿ ಅಜ್ಜ ಸುಮ್ಮನಾಗುವುದೆಂತು. ಒಂದಲ್ಲ ಒಂದು ವಿಧದಿಂದ ಭಾರತೀಯರನ್ನು ಸಂಘಟನೆಗೊಳಿಸುತ್ತಾ ಸಾಮ್ರಾಜ್ಯ ಶಾಹಿಯ ಒಂದೊಂದೇ ಕಾನೂನುಗಳ ಬಗ್ಗೆ ವಿರೋಧ ವ್ಯಕ್ತಪಡಿಸುತ್ತಾ ಇಡೀ ಜೀವನದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು."

"ಅಣ್ಣಾ! ಗಾಂಧಿ ಅಜ್ಜನ ಕತೆಯನ್ನು ನೀವು ಬಹು ಸುಲಭದಲ್ಲೇ ಮುಗಿಸಿ ಬಿಟ್ಟಿರಲ್ಲವೇ? ಇಡೀ ಜೀವನ ನಮ್ಮಜ್ಜ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು ಎಂದು ಚುಟುಕಾಗಿ ಹೇಳಿ ಮುಗಿಸಿದರೆ ಅದಕ್ಕೆಂದೂ ಈ ತಮ್ಮ ಒಪ್ಪಿ ಸುಮ್ಮನಿದ್ದಾನೆಂದು ಭಾವಿಸಬೇಡಿರಿ."

"ತಮ್ಮಾ! ಈಗಿನ ಕಾಲದ ಮಕ್ಕಳು ಬೇಕಾದ ಪ್ರಶ್ನೆಗಳನ್ನೆಂದೂ ಕೇಳುವುದಿಲ್ಲ. ಹೇಳಿದ್ದನ್ನು ಕೇಳಿ ತಣ್ಣಗಿರುತ್ತಾರೆ. ಬೇರೇನಾದರೂ ಸುದ್ದಿಯೆತ್ತಿದರೆ ಅರುವತ್ತು ಪ್ರಶ್ನೆಗಳನ್ನೇ ಹಾಕುತ್ತಾರೆ; ಎಂದು ಅಧ್ಯಾಪಕರು ಹೇಳುವುದನ್ನು ನಾನು ಕೇಳಿದ್ದೆ. ಅಂತೆಯೇ ನಿನ್ನನ್ನೂ ನಾನು ಭಾವಿಸಿದೆ."

"ನನ್ನಣ್ಣ ಭಾವಿಸಬಹುದು; ತಮ್ಮನ ಬಗ್ಗೆ ಅಣ್ಣನ ಅಭಿಪ್ರಾಯವೇ ವಿಚಿತ್ರವಾದದ್ದು!"

"ತಮ್ಮಣ್ಣಾ! ನಿನಗೆ ಸಿಟ್ಟು ಬರುತ್ತದೇನು?"

"ನನಗೆ ಸಿಟ್ಟು ಬಂದರೂ ಅದನ್ನು ಕಂಡು ಹೆದರುವವರು ಯಾರು? ನೀವು ಹೆದರುತ್ತೀರೇನು?"

"ಅಂದರೆ; ನೀನು ಅಷ್ಟೊ ಭಯಂಕರ ಮೂರ್ತಿಯೇ?"

"ಅಣ್ಣಾ! ನಾನು ಸೋತೆ. ಗಾಂಧಿ ಅಜ್ಜ ಮತ್ತೇನು ಮಾಡಿದರು?"

"ಆ ಬಳಿಕ ಗಾಂಧೀಜಿಯ ಮನಸ್ಸು ಖಿಲಾಫತ್ ಚಳವಳದ ಕಡೆಗೆ ಹರಿಯಿತು. ಈ ಚಳವಳವು ಮುಸಲ್ಮಾನರಿಗೆ ಮಾತ್ರ ಸಂಬಂಧಿಸಿದ್ದಲ್ಲ. ಹಿಂದೂ ಮುಸಲ್ಮಾನರು ಒಂದಾಗಿ ಈ ಚಳವಳದಲ್ಲಿ ಭಾಗವಹಿಸತಕ್ಕುದೆಂದು ಗಾಂಧೀಜಿಗನ್ನಿಸಿತು. ಹಿಂದೂಮುಸಲ್ಮಾನರಲ್ಲಿರುವ ಭೇದಭಾವನೆ ತೊಲಗಿ ಐಕ್ಯಭಾವನೆಗೆ ಇದು ತಳಹದಿಯಾಗಬಹುದೆಂದು ಅವರು ಮನಗಂಡರು."

"ಕಾರ್ಯದಿಂದಲೇ ನಾವೆಲ್ಲಾ ಒಂದು ಎಂದು ತೋರಿಸಿಕೊಡುವ ನಮ್ಮಜ್ಜನ ಬುದ್ಧಿವಂತಿಕೆಗೆ ಇದೂ ಒಂದು ದೃಷ್ಟಾಂತ"

"ಅದರಲ್ಲೇನು ಸಂದೇಹ. ಬಾಯಿಮಾತಿನಿಂದ ಏನು ತಾನೆ ಪ್ರಯೋಜನ? ಹಿಂದೂ ಮುಸಲ್ಮಾನರ ಐಕ್ಯಕ್ಕಾಗಿ ಗಾಂಧೀಜಿ ಚಳವಳ ಹೂಡಿದರು. ನಮ್ಮಜ್ಜ ಕೇವಲ ಹಿಂದುಗಳ ನಾಯಕನಲ್ಲ; ಮುಸಲ್ಮಾನರ ನಾಯಕನೂ ಹೌದು ಎಂದು ಮುಸಲ್ಮಾನರು ಒಪ್ಪಿಕೊಳ್ಳುವಂತಾಯಿತು."

"ನಮ್ಮಜ್ಜನಿಗೆ ಎಲ್ಲರೂ ಒಂದೇ ಹಾಗೆಯೇ ಸರಿ, ವಿಶ್ವಪ್ರೇಮಿ ನಮ್ಮಜ್ಜ ಎಂದು ನನ್ನಣ್ಣ ನನಗೆ ಹೇಳಿದ್ದು ಸುಳ್ಳೇನು?"

"ಓಹೋ! ಈಗ ಅಣ್ಣನನ್ನು ಹೊಗಳುವೆಯಾ? ಬೇಡ ಬೇಡ. ನಮ್ಮಜ್ಜನ ಗುಣಗಾನ ಮಾಡು. ಅದರಿಂದ ಪುಣ್ಯವಾದರೂ ದೊರೆಯಬಹುದು."

"ಹೌದಣ್ಣಾ! ಹಿರಿಯರನ್ನು ಗೌರವಿಸುವುದರಿಂದ ಪುಣ್ಯವೇ ದೊರೆಯುವುದು."

"ಗಾಂಧಿ ಅಜ್ಜನನ್ನು ನೆನೆದು ಅವರ ತತ್ವವನ್ನನುಸರಿಸಿದರೆ ಜೀವನವೇ ಪಾವನವಾಗುವುದು."

---

— ೧೦ —

"ಅಣ್ಣಾ! ಮುಂದಿನ ಕತೆಯೇನು?"

"ಕೇಳು, ನಮ್ಮಜ್ಜನಿಗೆ ದೊಡ್ಡ ಅಧಿಕಾರ ಸಿಕ್ಕಿತು"

"ಅದು ಎಂಥಾ ಅಧಿಕಾರವಣ್ಣಾ?"

"ಸತ್ಯಾಗ್ರಹ ನಡೆಯಿಸುವ ಅಧಿಕಾರ"

"ಅಂದರೆ ಬೇಕಾದಷ್ಟು ಸತ್ಯಾಗ್ರಹ ನಡೆಸಬಹುದೆಂದು ಪರಕೀಯರು ನಮ್ಮಜ್ಜನಿಗೆ ಅಧಿಕಾರ ಕೊಟ್ಟರೇ?"

"ತಮ್ಮಾ! ನಿನ್ನ ಮಾತು ಕೇಳಿದರೆ ನಗು ಬರುತ್ತದೆ. ಪರಕೀಯರು ಬೇಕಾದಷ್ಟು ತೊಂದರೆ ಕೊಡಬಹುದು ಎಂದು ಹೇಳುವ ಸಂಭಾವಿತರೇನು?"

"ಅಧಿಕಾರ ಮತ್ತೆ ಯಾರು ಕೊಟ್ಟರು?"

"ಲೋಕಮಾನ್ಯ ಬಾಲ ಗಂಗಾಧರ ತಿಲಕರ ತರುವಾಯ ನಮ್ಮಜ್ಜನಿಗೆ ರಾಜಕೀಯ ರಂಗದಲ್ಲಿ ಅಗ್ರಸ್ಥಾನ ದೊರೆಕಿತು. ರಾಷ್ಟ್ರೀಯ ಕಾಂಗ್ರೆಸ್, ಸತ್ಯಾಗ್ರಹ ನಡೆಸುವ ಸಂಪೂರ್ಣ ಅಧಿಕಾರವನ್ನು ನಮ್ಮಜ್ಜನಿಗೆ ಕೊಟ್ಟಿತು. ಅಂದರೆ ತಮ್ಮಣ್ಣಾ! ನಮ್ಮಜ್ಜ ಕಾಂಗ್ರೆಸಿನ ಮುಂದಾಳುಗಳಾದರು. ೧೮೮೫ರಿಂದ ಅನೇಕ ಮುಂದಾಳುಗಳ ನೇತೃತ್ವದಲ್ಲಿ ಕಾಂಗ್ರೆಸ್ ಅಧಿವೇಶನ ಜರಗುತ್ತಿದ್ದರೂ ಗಾಂಧೀಜಿಯ ನೇತೃತ್ವದಲ್ಲಿ ಜನರ ಏಕಾಗ್ರತೆ ಅತ್ಯಧಿಕವಾಯಿತು. ಎಲ್ಲಾ ಮಂದಿಗೂ ಹೊಸ ಚೈತನ್ಯ ಬಂದಹಾಗಾಯಿತು"

"ಅಣ್ಣಾ! ಈಗ ತಿಳಿಯಿತು. ನಮ್ಮಜ್ಜನಿಗೆ ಜನರು ತಮ್ಮನ್ನು ನಡೆಸಿಕೊಂಡು ಹೋಗುವ ಹೊಣೆಯನ್ನಿತ್ತರು."

"ಯುದ್ಧ ಕಾಲದಲ್ಲಿ ಬ್ರಿಟಿಷರಿಗೆ ನೆರವಾಗಿದ್ದರೂ ಸರಕಾರ ಭಾರತಕ್ಕೆ ಏನೂ ಹಿತವನ್ನುಂಟುಮಾಡಲಿಲ್ಲವಲ್ಲಾ ಎಂದು ಗಾಂಧೀಜಿಗನ್ನಿಸುತ್ತಿದ್ದಿತು. ನಮ್ಮ ದಾಸ್ಯದ ಬಿಡುಗಡೆಗಾಗಿ ಗಾಂಧೀಜಿಯೊಡನೆ ಅಸಹಕಾರ ಚಳವಳ ಹೂಡುವುದಕ್ಕೆ ಜನತೆ ಸಿದ್ಧವಾಗಿದ್ದಿತು. ಯುದ್ಧಕಾಲ

ದಲ್ಲಿ ತಮಗೆ ಸಿಕ್ಕಿದ ಪದಕಗಳನ್ನು ಗಾಂಧೀಜಿ ತಿರಸ್ಕರಿಸಿದರು. ತಮ್ಮದು ತಮಗೇ ಆಯಿತು ಎಂದು ಅವರಿಗೆ ಹಿಂತಿರುಗಿಸಿದರು."

"ಎಷ್ಟು ಕೆಚ್ಚೋ ನಮ್ಮಜ್ಜನಿಗೆ!"

"ತಮ್ಮಾ! ಗುಜರಾತಿನ ಬಾರ್ಡೋಲಿಯಲ್ಲಿ ಸತ್ಯಾಗ್ರಹ ನಡೆಯಿತು. ಅಲ್ಲಿನ ರೈತರು ತಾವು ತೆರಿಗೆ ಕೊಡಲಾರೆವೆಂದು ಪಣದೊಟ್ಟರು. ವಲ್ಲಭ ಭಾಯಿ ಪಟೇಲರು ಅವರ ನಾಯಕರಾಗಿದ್ದರು. ಅಲ್ಲಿನ ಜನರ ಅವಸ್ಥೆ ಬಹುಶೋಚನೀಯವಾಗಿದ್ದಿತು. ಬ್ರಿಟಿಷ್ ಸರಕಾರವು ತನ್ನ ಅತ್ಯಾಚಾರಕ್ಕೆ ಮಿತಿಯಿಲ್ಲದೆ ಬಡರೈತರಿಂದ ದಂಡಾತ್ಮಕ ತೆರಿಗೆಯನ್ನು ವಸೂಲು ಮಾಡಲು ಯತ್ನಿಸಿತು. "ಸರದಾರ" ಎಂಬ ಬಿರುದು ಆಗಲೇ ಅವರ ಧೈರ್ಯ ಸಾಹಸ ಸಾಮರ್ಥ್ಯಗಳನ್ನು ಕಂಡ ಗಾಂಧಿಜೀಯಿಂದ ಕೊಡಲಾಯಿತು. ಅಂದಿನಿಂದ ಸರದಾರ ವಲ್ಲಭಭಾಯಿ ಪಟೇಲರೆನಿಸಿಕೊಂಡರು."

"ರೈತರು ಗೆದ್ದರೇನಣ್ಣ?"

"ಸರಕಾರ ಸೋತು ಹೋಯಿತು. ಕಂದಾಯ ಇಳಿಸಲು ವಿಧಿಯಿಲ್ಲದೆ ಒಪ್ಪಿಕೊಂಡಿತು. ಬಾರ್ಡೋಲಿ ಸತ್ಯಾಗ್ರಹವು ಇಡೀ ದೇಶಕ್ಕೆ ಆದರ್ಶಪ್ರಾಯವಾಯಿತು. ಗಾಂಧಿ ಅಜ್ಜ ಯಂಗ್ ಇಂಡಿಯಾ ಎಂಬ ಪತ್ರಿಕೆಯಲ್ಲಿ ರಾಜನೀತಿಗೆ ವಿರೋಧವಾಗಿ ಲೇಖನ ಬರೆದುದರಿಂದ ಸರಕಾರದ ಕಣ್ಣು ಕೆಂಪಾಯಿತು. ಗಾಂಧೀಜಿಯನ್ನು ಅದಕ್ಕಾಗಿ ಸೆರೆ ಹಿಡಿದರು. ಗಾಂಧಿ ಅಜ್ಜನಿಗೆ ಆರು ವರ್ಷಗಳ ಕಠಿಣ ಸಜೆ ವಿಧಿಸಲಾಯಿತು."

"ಅಣ್ಣಾ! ಲೇಖನ ಬರೆದರೆ ಜೈಲಿಗೆ ಕೊಂಡುಹೋಗುತ್ತಿದ್ದರೇ? ಆಶ್ಚರ್ಯ!"

"ಆಶ್ಚರ್ಯವೇನು? ಸರಕಾರಕ್ಕೆ ವಿರೋಧವಾಗಿ ವರ್ತಿಸುವುದು ಸರಕಾರಕ್ಕೆ ಸರಿಗಾಣುವುದೆಂತು? ಮಾತನಾಡುವುದಕ್ಕೆ ಸ್ವಾತಂತ್ರ್ಯವಿಲ್ಲದ ಭಾರತೀಯರಿಗೆ ಬರೆದರೆ ಶಿಕ್ಷೆಯಾಗದಿರುವುದೆಂತು? ಗಾಂಧೀಜಿ ಅಸೌಖ್ಯದಲ್ಲಿ ಬಿದ್ದರು. ಇದರಿಂದ ಅವಧಿಯ ತನಕ ಕಾಯದೆ ಸರಕಾರವು ಮರಣಪ್ರಾಪ್ತನಾದರೆ ತೊಂದರೆಯಾದೀತೆಂದು ೧೯೨೪ರಲ್ಲೇ ಗಾಂಧೀಜಿ

ಯನ್ನು ಎರಡು ವರ್ಷದಲ್ಲೇ ಬಿಡುಗಡೆ ಮಾಡಿತು. ರಾಜಕೀಯ ರಂಗದಲ್ಲಿ ಪರಕೀಯ ಸರಕಾರದ ಸ್ವಾಮಿನಿಷ್ಟೆಗೆ ತಿಲಾಂಜಲಿ ಕೊಡ ಬೇಕೆಂದು ಗಾಂಧೀಜಿ ನಾಗಪುರ ಕಾಂಗ್ರೆಸ್ ಅಧಿವೇಶನದಲ್ಲಿ ಶಾಸನ ವನ್ನು ತಿದ್ದಿದುದರಿಂದಲಾಗಿ ಇಬ್ಭಾಗವಾಗಿದ್ದಿತು. ಆದರೂ ಗಾಂಧೀಜಿ ಪ್ರಮುಖರಾದ ಮೋತಿಲಾಲ ನೆಹರುಗಳನ್ನೂ, ಚಿತ್ತರಂಜನ ದಾಸರನ್ನೂ ನೋಯಿಸದೆ ತಮ್ಮ ಪಂಗಡದಲ್ಲೇ ಇರಿಸಿಕೊಂಡಿದ್ದರು."

"ಅಣ್ಣಾ! ಗಾಂಧೀಜಿ ಅಸಹಕಾರ ಚಳವಳ ಮಾಡಿದರಲ್ಲವೇ? ಇನ್ನಾವ ಚಳವಳದ ಯೋಚನೆಯಾಯಿತು?"

"ತಮ್ಮಾ! ಚಳವಳ ಮಾಡಲಿಲ್ಲ. ಉಪವಾಸ ಮಾಡಿದರು."

"ಯಾಕೆ ಉಪವಾಸ ಮಾಡಿದರು?"

"ಹಿಂದೂ ಮುಸಲ್ಮಾನ್ ಎಂಬ ಭೇದವನ್ನು ಕಟ್ಟಿಕೊಂಡು ಜನತೆ ಬಡಿದಾಡುತ್ತಿರುವುದನ್ನು ಕಂಡು ಜನತೆಯನ್ನು ತಿದ್ದಲಾಗಿಯೇ ಉಪ ವಾಸ ಮಾಡಿದರು."

"ಅಣ್ಣಾ! ಮಕ್ಕಳ ಹಾಗೆ ಗಾಂಧಿ ಅಜ್ಜ ಹಟ ಮಾಡುತ್ತಿದ್ದರಲ್ಲಾ! ತಾನು ಬಯಸಿದ ಹಾಗೆ ಆಗದಿದ್ದರೆ ಉಣ್ಣೋದಿಲ್ಲ ತಿನ್ನೋದಿಲ್ಲ ಎಂದು ಮಕ್ಕಳು ಹಟ ಮಾಡುತ್ತಾರಷ್ಟೆ."

"ಹೌದು, ಕತೆ ಹೇಳದಿದ್ದರೆ ಕೊಟ್ಟುದೊಂದೂ ನನಗೆ ಬೇಡ. ಯಾರ ಹತ್ತಿರವೂ ನಾನು ಮಾತನಾಡುವುದಿಲ್ಲ. ಚಾಪೆ ಬಿಡಿಸಿ ಇಡೀ ದಿನ ತಣ್ಣಗೆ ಮಲಗಿಕೊಳ್ಳುತ್ತೇನೆ; ನನಗೆ ಊಟವೂ ಬೇಡ; ಕಾಫಿಯೂ ಬೇಡ; ಎನ್ನುವ ತಮ್ಮ ನೀನೂ ಕೂಡ ಹಾಗೆಯೇ ಸರಿ."

"ಅಣ್ಣಾ! ಆದರೆ ನಾನು ಬಾಯಲ್ಲಿ ಅಣ್ಣನೊಡನೆ ತಮಾಷೆಗೆ ಹೇಳು ತ್ತೇನೇ ಹೊರತು ಹಾಗೆ ಮಾಡುವುದಿಲ್ಲವಷ್ಟೆ!"

"ಅದಿರಲಿ, ಗಾಂಧಿ ಅಜ್ಜನಲ್ಲಿ ಜನತೆಗೆ ಅತ್ಯಂತ ಆದರವಿತ್ತು. ಸಾಮಾನ್ಯ ಒಬ್ಬನು ಈರೀತಿ ಮಾಡಿದರೆ ಅವನು ಉಪವಾಸ ಕುಳಿತರೆ ನಮಗೇನಂತೆ ಎಂದು ಜನರು ಹೇಳಬಹುದಿತ್ತು. ಭಾರತದ ಹಿಂದುಗಳ ಮಾತ್ರವಲ್ಲ; ಮುಸ್ಲಿಮರಿಗೂ ನಾಯಕ ಎಂದೆನಿಸಿಕೊಂಡ ಮೇಲೆ ಮುಂದಾಳು ಉಪವಾಸ

ಕುಳಿತಿರುವುದನ್ನು ಕಂಡು ಸುಮ್ಮನಿರುವುದೆಂತು? ಇಪ್ಪತ್ತೊಂದು ದಿವಸ ಗಳ ಉಪವಾಸ ವ್ರತ ಹಿಡಿದ ನಮ್ಮಜ್ಜ ಜಾತೀಯ ಗಲಭೆಯನ್ನು ಶಾಂತ ರೀತಿಯಿಂದಲೇ ಸಮಾಧಾನಗೊಳಿಸಿದರು. ಇದೇ ರೀತಿ ಮತ್ತೊಮ್ಮೆ ಆಶ್ರಮದಲ್ಲಿ ಕಂಡುಬಂದ ಕೆಟ್ಟ ನಡತೆಯನ್ನು ದೂರೀಕರಿಸುವುದಕ್ಕಾಗಿ ಏಳು ದಿವಸ ಉಪವಾಸ ಕುಳಿತುಕೊಂಡರು."

"ಬಹಳ ಒಳ್ಳೆಯ ಉಪಾಯ ನಮ್ಮಜ್ಜನದು. ತಾನು ಉಪವಾಸ ಕುಳಿತುಕೊಳ್ಳುತ್ತೇನೆ ಎಂದು ನಮ್ಮಜ್ಜನೆಂದರೆ ಎಲ್ಲರೂ ಹೆದರಿ ಸುಮ್ಮನೆ ಕುಳಿತುಕೊಳ್ಳುತ್ತಿದ್ದರೇ! ಇದೇ ವಿಚಿತ್ರ!"

"ನಮ್ಮಜ್ಜನ ಉಪವಾಸವೆಂದರೆ ಸಾಮಾನ್ಯ ಮಹತ್ವವುಳ್ಳುದಲ್ಲ. ಗಾಂಧೀಜಿ ಉಪವಾಸ ಕುಳಿತರು ಎಂದರೆ ಇಡೀ ಜಗತ್ತೇ ಚಿಂತೆಗೊಳ ಗಾಗುತ್ತಿತ್ತು. ಗಾಬರಿಗೊಂಡು ಉಪವಾಸ ಕುಳಿತುಕೊಳ್ಳಬೇಡಿರಿ ಎಂದು ಅಂಗಲಾಚಿ ಬೇಡಿಕೊಳ್ಳುತ್ತಿತ್ತು?"

"ಅಣ್ಣಾ! ಇದೆಲ್ಲಾ ನಡೆದದ್ದಾದರೂ ಕೇಳುವಾಗ ಹೀಗೂ ಆಯಿತೇ? ಎಂದು ನಿಜವಾಗಿಯೂ ವಿಸ್ಮಯವೇ ಆಗುತ್ತಿದೆ."

"ಜಗತ್ತೇ ಗಾಂಧೀಜಿಯ ಕತೆ ಕೇಳಿ ವಿಸ್ಮಯಪಡುವುದು. ಹಿಂದೂ ಮುಸಲ್ಮಾನರೆಂಬ ಭೇದ ಭಾರತದಲ್ಲಿರಕೂಡದೆಂದು ಗಾಂಧಿ ಅಜ್ಜ ಬಹಳ ಶ್ರಮಪಟ್ಟರು. ಪಂಡಿತ್ ಮೋತಿಲಾಲರೂ ಇದ್ದುಕೊಂಡು ಒಂದು ಕಮಿಟಿ ನಿರ್ಮಿಸಲಾಯಿತು. ಭಾರತದ ಸಂಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಗುರಿಯೆಂದು ಸರಕಾರಕ್ಕೆ ತಿಳಿಸಿದರು. ಸಾವಿರದೊಂಭೈನೂರ ಇಪ್ಪತ್ತೊಂಭತ್ತರ ಅಂತ್ಯದೊಳಗೆ ಡೊಮಿನಿಯನ್ ನೆಲೆ ದೊರೆಯದೆ ಹೋದರೆ ಚಳವಳ ಹೂಡುವುದಾಗಿ ನಿಶ್ಚಯವಾಯಿತು."

"ಆದರೆ ಅದಕ್ಕೆ ಸರಕಾರ ಒಪ್ಪಿತೇ?"

"ಕೇಳಿದ ಮಾತ್ರಕ್ಕೆ ಸರಕಾರ ಒಪ್ಪೀತೇ? ಕೈಯಲ್ಲಿರುವ ದೊಡ್ಡ ದೊಂದು ರಾಷ್ಟ್ರವನ್ನು ಬಿಡುವುದಕ್ಕೆ ಹೇಗೆ ತಾನೆ ಮನಸ್ಸು ಬಂದೀತು? ಸ್ವಾತಂತ್ರ್ಯ ನಮ್ಮ ಹಕ್ಕಾದರೂ ದೊರೆಯುತ್ತಿರುವ ಲಾಭವನ್ನು ಬಿಡುವು ದಕ್ಕೆ ಅವರಿಗೆಂತು ಮನಸ್ಸು ಬಂದೀತು?"

"ಹಾಗಿದ್ದರೆ ದೊಡ್ಡ ಚಳವಳವೇ ಆಯಿತು ಎನ್ನಬಹುದು."

"ತಮ್ಮಾ! ಅವರು ಸ್ವಾತಂತ್ರ್ಯ ಕೊಟ್ಟದು ೧೯೪೭ರಲ್ಲಿ ಅಲ್ಲವೇ? ಒಂದನ್ನೂ ಅರಿಯದವನಂತೆ ಪ್ರಶ್ನೆಮಾಡುತ್ತಿರುವೆಯಲ್ಲಾ!"

"ಅದು ಗೊತ್ತಿದೆ. ಪರಕೀಯರು ವಂಚಕರಲ್ಲವೇನಣ್ಣ. ಹಾಗೆ ಒಪ್ಪಿ ಮೋಸಮಾಡಿದರೇ ಎಂಬ ಸಂದೇಹದಿಂದ ಕೇಳಿದೆ."

"ವಂಚಕರು ಸ್ವಾರ್ಥಿಗಳು ಎಂಬುದನ್ನು ಒಪ್ಪಲೇ ಬೇಕಲ್ಲವೇ? ಜಗತ್ತಿನಲ್ಲಿ ಸ್ವಾರ್ಥ ಅವರು ಬಿಟ್ಟದ್ದು ಇದೇ"

"ಆದರೆ ನಮ್ಮೂರ ಜನರೂ ಸ್ವಾರ್ಥಿಗಳಾಗಿಯೇ ಇದ್ದಾರಲ್ಲಣ್ಣಾ! ಅದೇಕೆ?"

"ಒಂದೂವರೆ ಶತಮಾನದಿಂದ ಪಾಶ್ಚಾತ್ಯರ ದಾಸರಾಗಿ ನಮ್ಮಲ್ಲಿ ಅಂಟಿಕೊಂಡ ಬುದ್ಧಿ ಅದೇ ಅಲ್ಲವೇ? ಅವರು ನಮಗೆ ಕಲಿಸಿ ಕೊಟ್ಟ ಬುದ್ಧಿ ಇದೇ? ಭಾರತೀಯರಿಗೆ ದೇಶಪ್ರೇಮ ಸ್ವತಂತ್ರ ಮನೋವೃತ್ತಿ ಇವೊಂದೂ ಅವರ ಆಳ್ವಿಕೆಯಲ್ಲಿ ಉಂಟಾಗುವುದಕ್ಕೆ ಎಡೆಯಿರಬೇಕು ತಾನೆ?"

"ಹಾಗೇನು ಮಾಡಿದರು?"

"ತಮ್ಮಾ! ಅವರು ಮಹಾಕಪಟಿಗಳು. ನಮ್ಮ ದೇಶದ ಚರಿತ್ರೆಯನ್ನು ಪಾಶ್ಚಾತ್ಯರೇ ಹಾಳುಮಾಡಿದರು. ಸುಳ್ಳು ಸುಳ್ಳು ಚರಿತ್ರೆಗಳನ್ನು ಬರೆದು ನಮಗೆ ಕಲಿಸಿ ನಮ್ಮ ಬುದ್ಧಿಯನ್ನು ಕೆಡಿಸಿದರು. ನಮ್ಮನ್ನು ಅನ್ಯೋನ್ಯ ವಿರೋಧಿಗಳೆಂಬಂತೆ ಮಾಡಿ ಸ್ವಾರ್ಥಕೂಪದಲ್ಲಿ ಮುಳುಗಿಸಿ ಬಿಟ್ಟರು. ಪ್ರಪಂಚವೆಂದರೇನು? ಮಾನವಜೀವನ ಎಂದರೆ ಯಾವುದು? ಎಂಬುದರ ಗೊಡವೆ ಇದರಿಂದ ನಮಗಿಲ್ಲದಾಯಿತು."

"ಅಣ್ಣಾ! ಆದರೆ ನಮ್ಮ ಚರಿತ್ರೆಯೆಲ್ಲಾ ಸುಳ್ಳೇ?"

"ತಮ್ಮಾ! ಹೆಚ್ಚಿನ ಅಂಶವೂ ಸುಳ್ಳೇ. ಹಿಂದುಗಳನ್ನು ಮುಸಲ್ಮಾನರು ಹಾಳುಮಾಡಿದರು. ಅವರನ್ನು ಹಿಂದುಗಳು ವಿರೋಧಿಸಿದರು. ದೇವಾಲಯವನ್ನು ಹೊಕ್ಕರು. ಬಿಂಬವನ್ನು ಕಿತ್ತರು ಇತ್ಯಾದಿಯಾಗಿ ಸುಳ್ಳು ಸುಳ್ಳು ಬೇಕಾದಂತೆ ಬರೆದು ಹಿಂದು ಮುಸಲ್ಮಾನರಲ್ಲಿ

ವೈರವುಳಿಯುವಂತೆ ಮಾಡಿದರು. ಅಕ್ಬರ್, ಹೈದರ್ ಆಲಿ ಮೊದಲಾದ ಮುಸಲ್ಮಾನ ಬಾಂಧವರು ನಿಜವಾಗಿಯೂ ಹಿಂದುಗಳನ್ನು ಬಹು ಆದರ ದಿಂದಲೇ ಕಂಡಿದ್ದರು."

"ಅಣ್ಣಾ! ಸುಳ್ಳು ಹೇಳಿ ಜಗಳ ಮಾಡಿಸಿ ನಮ್ಮ ತಲೆ ಕೆಡಿಸಿದರೇ?"

"ಹೌದು, ಭಾರತವನ್ನು ಪರಕೀಯರು ಸ್ವಾಧೀನಪಡಿಸಿದ್ದೂ 150 ವರ್ಷಗಳ ತನಕ ಆಳಿದ್ದೂ ಕುತಂತ್ರದಿಂದಲೇ! ಅವರ ಮಾರ್ಗ ವಿಚಿತ್ರ ಮಾರ್ಗ. ಅವರು ನಮಗೆ ಗುಲಾಮರಾಗಿರುವುದಕ್ಕೆ ಮಾತ್ರ ಕಲಿಸಿ ದ್ದಾರಲ್ಲದೆ ಮತ್ತಾವುದನ್ನೂ ಕಲಿಸಲಿಲ್ಲ."

"ಅಣ್ಣಾ! ಪರಕೀಯರ ಮನಸ್ಸು ಬಹು ಕಲ್ಮಷದಿಂದ ಕೂಡಿ ದ್ದಲ್ಲವೇ?"

"ಸ್ವಾರ್ಥಿಗಳ ಮನಸ್ಸು ಎಂದೂ ಹಾಗೆಯೇ ಸರಿ. ಪರಕೀಯರ ಬುದ್ಧಿಯು ಅರಿವು ಭಾರತೀಯರಿಗೆ ಉಂಟಾಯಿತು. ಪರಕೀಯ ಸರಕಾರವು ಕೇಳಿಕೊಂಡಂತೆ ಡೊಮಿನಿಯನ್ ನೆಲೆ ಕೊಡಲು ಒಪ್ಪದ್ದರಿಂದ ೧೯೩೦ರಲ್ಲಿ ಅಖಿಲಭಾರತ ಕಾಂಗ್ರೆಸ್ ಸ್ವಾತಂತ್ರ್ಯ ಪ್ರತಿಜ್ಞೆ ಮಾಡಿತು."

"ಸ್ವಾತಂತ್ರ್ಯ ಪ್ರತಿಜ್ಞೆ ಎಂದರೆ ಏನಣ್ಣಾ?"

"ಸ್ವಾತಂತ್ರ್ಯ ನಮ್ಮ ಆಜನ್ಮಸಿದ್ಧ ಹಕ್ಕು. ಅದು ನಮಗೆ ಸಿಗ ತಕ್ಕದು. ಅದಕ್ಕಾಗಿ ನಾವು ಹೋರಾಡುವೆವು. ಅದೇ ನಮ್ಮ ಗುರಿ, ಎಂದು ಪ್ರತಿಜ್ಞೆ ಮಾಡಿದುದಕ್ಕೆ ಸ್ವಾತಂತ್ರ್ಯ ಪ್ರತಿಜ್ಞೆ ಎನ್ನುವರು. ಸ್ವಾತಂತ್ರ್ಯ ಪ್ರತಿಜ್ಞೆ ಮಾಡಿದ ಕಾಂಗ್ರೆಸ್ ಸರಕಾರದೊಡನೆ ಆ ಬಗ್ಗೆ ಚಳವಳ ಹೂಡುವು ದಾಗಿ ತಿಳಿಸಿತು."

"ಆದರೆ ಇದರಿಂದ ಪರಕೀಯರಿಗೆ ಗಾಬರಿಯಾಗಿರಬಹುದು?"

"ಅಲ್ಪ ಸ್ವಲ್ಪ ಆಗಿರಬಹುದು. ಆದರೆ ಬಡ ಭಾರತೀಯರಿಂದ ಏನು ಮಾಡಲು ಸಾಧ್ಯ? ಎಂಬ ತಿಳುವಳಿಕೆಯೂ ಇದ್ದಿರಬಹುದು. ಭಾರತೀಯರು ಬೊಬ್ಬೆಹೊಡೆಯುವರೇ ಹೊರತು ಅವರಲ್ಲಿ ಯುದ್ಧಕ್ಕೆ ಹೊರಡಲು ಶಕ್ತಿ ಎಲ್ಲಿಂದ? ಕೋವಿ ಎತ್ತುವ ಅಧಿಕಾರ ಕೂಡ ಭಾರ ತೀಯರಿಗಿಲ್ಲ ತಾನೆ, ಎಂದು ಅವರು ಯೋಚಿಸಿರಬಹುದು."

"ಅಣ್ಣಾ! ಸರಿ. ಎಂಥಾ ದುರಾಲೋಚನೆ ಅವರದು! ಅದಕ್ಕಾಗಿಯೇ ಭಾರತೀಯರಿಗೆ ಯಾವ ಹಕ್ಕನ್ನೂ ಕೊಡಲಿಲ್ಲ ಅಲ್ಲವೇ?"

"ಹೌದು, ಭಾರತೀಯರನ್ನು ಕುರಿಗಳನ್ನಾಗಿ ಮಾಡಿ ಅವರು ಆಳುತ್ತಿದ್ದರು. ಗಾಂಧೀಜಿ ಉಪ್ಪಿನ ಕಾಯಿದೆಯನ್ನು ತಾನು ವಿರೋಧಿಸುವುದಾಗಿ ತಿಳಿಸಿ ಸತ್ಯಾಗ್ರಹಕ್ಕೆ ಮುಂದಾದರು. ೧೯೩೦ನೇ ಇಸವಿ ಮಾರ್ಚಿ ಹತ್ತರಂದು ಭಾರತದ ಚರಿತ್ರೆಯಲ್ಲಿ ಪ್ರಸಿದ್ಧವೆನಿಸಿದ ದಂಡೀಯಾತ್ರೆ ಪ್ರಾರಂಭವಾಯಿತು. ಎಲ್ಲರೂ ಉಪ್ಪನ್ನು ತಯಾರಿಸತೊಡಗಿದರು. ಈ ಸತ್ಯಾಗ್ರಹವನ್ನು ಅಣಗಿಸಲು ಅನೇಕ ಕಾನೂನುಗಳನ್ನು ಸರಕಾರ ಜಾರಿಗೆ ತಂದಿತು. ಜನರನ್ನು ಸೆರೆಮನೆಗೊಯ್ಯತೊಡಗಿದರು. ಜನರ ಉತ್ಸಾಹ ಕುಂದಲಿಲ್ಲ."

"ಭಾರತೀಯರು ಉಪ್ಪು ಮಾಡಿದರೆ ತಪ್ಪೇನು?"

"ಅವರ ವರ್ತನೆ ಹಾಗಿದೆ. ಭಾರತೀಯರಿಗೆ ಯಾವುದೊಂದೂ ಅಧಿಕಾರವಿರಲಿಲ್ಲ. ಅವರು ಕೊಟ್ಟುದನ್ನು ತಿಂದು ಮೃಗಗಳಂತೆ ಭಾರತೀಯರು ಸುಮ್ಮನೆ ಬಿದ್ದಿರಬೇಕಿತ್ತು. ಭಾರತೀಯರಿಗೆ ಲಾತಿಯ ಪೆಟ್ಟು ಸಿಕ್ಕಿತು. ಗುಂಡಿನೇಟು ದೊರೆಯಿತು. ಆದರೂ ಜನತೆ ಬಗ್ಗಲಿಲ್ಲ. ಸರಕಾರಕ್ಕೆ ಆಳುವುದಕ್ಕೂ ಬಹಳ ಕಷ್ಟವಾಯಿತು. ಗಾಂಧೀಜಿಯನ್ನು ಸೆರೆಮನೆಗೊಯ್ದರು"

"ಪಾಪ ನಮ್ಮಜ್ಜ ಜೈಲಿಗೆ ಹೋದರೇ? ಆದರೆ ಮುಂದಿನ ಗತಿ?"

"ಗಾಂಧೀಜಿಯ ಸೆರೆಯಿಂದಲಾಗಿ ಚಳವಳ ಶಾಂತವಾಗಲಿಲ್ಲ. ಸರಕಾರದ ಅತ್ಯಾಚಾರ ಮೇರೆಮೀರಿತ್ತು. ಜನತೆ ಅದನ್ನು ಸಹಿಸಲಿಲ್ಲ. ಅಹಿಂಸಾರೂಪದ ಚಳವಳ ಹಿಂಸೆಯರೂಪ ತಾಳಿತು. ಜನರು ದಂಗೆಯೆದ್ದರು. ಸರಕಾರವು ಕಾಂಗ್ರೇಸನ್ನು ನ್ಯಾಯಬಾಹಿರ ಸಂಸ್ಥೆಯೆಂದು ದೂರಿತು. ಡಾ॥ ಜಯಕರರೂ ಸರ್ ತೇಜಬಹದ್ದೂರ್ ಸಪ್ರೂ ಅವರೂ ಗಾಂಧಿ ಅಜ್ಜನ ಬಿಡುಗಡೆಗಾಗಿ ಬಹಳ ಪ್ರಯತ್ನಪಟ್ಟರು. ೧೯೩೧ರಲ್ಲಿ ಗಾಂಧಿ ಅಜ್ಜನ ಬಿಡುಗಡೆಯಾಯಿತು"

"ಆದರೆ ಚಳವಳದ ಪರಿಣಾಮ?"

"ಪರಿಣಾಮ ಕೇಳಬೇಕೇ? ಸತ್ಯಾಗ್ರಹ ಜಯಪ್ರದವಾಯಿತು. ಕಾಂಗ್ರೆಸ್ಸಿನೊಡನೆ ಒಪ್ಪಂದ ನಡೆಯಿತು. ಹಳ್ಳಿಪಳ್ಳಿಗಳಲ್ಲಿಯೂ ಉಪ್ಪು ತಯಾರಿಸಲು ಅಡ್ಡಿಯಿಲ್ಲವೆಂದು ಸರಕಾರವು ಒಪ್ಪಿಕೊಂಡಿತು. ರಾಜಕೀಯ ಕೈದಿಗಳೆಲ್ಲರ ಬಿಡುಗಡೆಯಾಯಿತು. ಸರಕಾರವು ತನ್ನ ದಂಡನಾತ್ಮಕ ಕಾಯಿದೆಗಳನ್ನು ರದ್ದುಮಾಡಿತು."

"ಅಣ್ಣಾ! ಆಗ ನಾನೂ ಇರಬೇಕಿತ್ತು. ನಾನೂ ಸತ್ಯಾಗ್ರಹ ಮಾಡುತ್ತಿದ್ದೆ."

"ಲಾಟಿ ಪೆಟ್ಟೆರಡು ತಿಂದು ಓಡಿ ಬಂದು ಅಣ್ಣಾ! ಎಂದು ಅಳಬಹುದಿತ್ತು ಅಲ್ಲವೇ?"

"ಅಂದರೆ ನಾನಷ್ಟು ಹೇಡಿಯೇ? ನಾನೂ ಗಾಂಧಿ ಅಜ್ಜನೊಂದಿಗೆ ಜೈಲಿಗೆ ಹೋಗುತ್ತಿದ್ದೆ."

"ಕತೆ ಕೇಳುವಾಗ ನಿನಗೆ ಬಹಳ ಒಳ್ಳೆಯದಾಗುತ್ತಿದೆ. ಅನುಭವಿಸಿದ ಕಷ್ಟ ಅವರಿಗೇ ಗೊತ್ತು."

"ಅಣ್ಣಾ! ನೀವು ತಮಾಷೆ ಮಾಡುತ್ತೀರಿ, ನನಗೂ ಕತೆ ಕೇಳುವಾಗ ಆವೇಷ ಬರುತ್ತಿದೆ. ಖಂಡಿತ ಸತ್ಯಾಗ್ರಹ ಮಾಡುತ್ತಿದ್ದೆ."

"ನಿನಗೆ ಆ ವೇಷ ಬರುತ್ತದೋ ಅಥವಾ ಈ ವೇಷ ಬರುತ್ತದೋ ನನಗರಿಯದು ಅದಿರಲಿ, ಪುನಃ ಅಸಹಕಾರ ಚಳವಳವಾಯಿತು. ಗಾಂಧೀಜಿಯ ಬಂಧನವಾಯಿತು."

"ಅಣ್ಣಾ! ಗಾಂಧಿ ಅಜ್ಜ ಚಳವಳ ಹೂಡಿದ್ದಕ್ಕೂ ಜೈಲಿಗೆ ಹೋದದ್ದಕ್ಕೂ ಲೆಕ್ಕವೇ ಇಲ್ಲದ ಹಾಗಾಯಿತು ಅಲ್ಲವೇ?"

"ಹೌದು, ಗಾಂಧಿ ಅಜ್ಜನ ಅರ್ಧಾಯುಷ್ಯವೂ ಜೈಲಿನಲ್ಲೇ ಕಳೆಯಿತೆನ್ನಬಹುದು."

"ಎಂಥಾ ದೇಶಪ್ರೇಮ ನಮ್ಮಜ್ಜನದು."

"ನಮ್ಮಜ್ಜನ ದೇಶಪ್ರೇಮದ ಕುರಿತು ಏನೆನ್ನಲಿ, ನಮ್ಮಜ್ಜ ಹುಟ್ಟದಿರುತ್ತಿದ್ದರೆ ನಮ್ಮ ಸ್ವಾತಂತ್ರ್ಯ ಇನ್ನೂ ಕನಸಿನ ಗಂಟಾಗಿರುತ್ತಿತ್ತು. ಗಾಂಧಿ ಅಜ್ಜನ ಚಳವಳವನ್ನು ಆರು ವಾರದಲ್ಲಿ ಇಲ್ಲದ ಹಾಗೆ ಮಾಡುವೆ

ವೆಂದು ಸರಕಾರ ಸಾರಿದರೂ ವರ್ಷಗಟ್ಟಲೆ ಯತ್ನಿಸಿದರೂ ಸರಕಾರದಿಂದ ಆಗಲೇ ಇಲ್ಲ. ಗಾಂಧಿ ಅಜ್ಜ ಸೆರೆಮನೆ ಸೇರಿದರೂ ಅಲ್ಲಿಂದಲೇ ಹೋರಾಡಲು ಯತ್ನಿಸಿದರು.?"

"ಜೈಲಿನೊಳಗಿದ್ದು ಏನು ಮಾಡಿದರು? ಅಲ್ಲಿ ಗಲಭೆ ಎಬ್ಬಿಸಿದರೇ? ಅಲ್ಲಿಯೂ ಜನರನ್ನು ಹುರಿದುಂಬಿಸಿದರೇ?"

"ಜಾತೀಯ ಏವಾರ್ಡ್ ಕಾನೂನು ಭಾರತವನ್ನು ಬಿಕ್ಕಟ್ಟಿಗೀಡು ಮಾಡುವುದೆಂದು ಗಾಂಧೀಜಿಗೆ ಅನ್ನಿಸಿತು. ಅದನ್ನು ರದ್ದುಗೊಳಿಸದಲ್ಲಿ ಆಮರಣ ಪರ್ಯಂತ ನಿರಶನವ್ರತ ಮಾಡುವುದಾಗಿ ನಿಶ್ಚೈಸಿದರು. ಗಾಂಧೀಜಿಯ ನಿರಶನ ಸತ್ಯಾಗ್ರಹ ಪ್ರಾರಂಭವಾಯಿತು."

"ಎಲ್ಲಿದ್ದರೂ ನಮ್ಮಜ್ಜ ಬಿಡಲಾರ. ನಮ್ಮಜ್ಜನ ಬಗ್ಗೆ ಎಷ್ಟು ರೇಗುತ್ತಿದ್ದರೋ ಏನೋ?"

"ರೇಗದೆ ಇದ್ದರೆ ಸೆರೆಮನೆಗೊಯ್ಯುತ್ತಾರೇನು? ಎಷ್ಟಾದರೂ ಗಾಂಧಿ ಅಜ್ಜ ಸಂಪೂರ್ಣ ಭಾರತದ ನಾಯಕರಲ್ಲವೇ? ಸಾಮಾನ್ಯ ವ್ಯಕ್ತಿಯನ್ನಾದರೆ ಸರಕಾರ ಗುಂಡಿಕ್ಕಿ ಕೊಲ್ಲುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಗಾಂಧೀಜಿಗೆ ತೊಂದರೆಯಾದಲ್ಲಿ ಭಾರತವೇ ಮುನಿಯುವುದೆಂಬುದು ಅವರಿಗೂ ಗೊತ್ತಿದ್ದಿತು"

"ಪರಕೀಯರಿಗಂತೂ ಗಾಂಧಿ ಅಜ್ಜನಿಂದ ದೊಡ್ಡ ಸಂಕಟವೇ ಆಯಿತು"

"ಸಂಕಟವಾಗದೆ ಇದ್ದೀತೆ? ಗಾಂಧೀಜಿಯ ಉಪವಾಸದ ಫಲವಾಗಿ ಏವಾರ್ಡ್ ಕಾನೂನನ್ನು ತಿದ್ದುಪಡಿ ಮಾಡಲು ಒಪ್ಪಿದರು. ಆ ಬಳಿಕ ಉಪವಾಸವನ್ನು ಹಿಂತೆಗೆದರು. ಮತ್ತೊಮ್ಮೆಯೂ ಅಸ್ಪೃಶ್ಯತಾ ನಿವಾರಣೆಗಾಗಿ ನಮ್ಮಜ್ಜ ಉಪವಾಸ ಮಾಡಿದರು"

"ಉಪವಾಸ ಮಾಡುವುದು ಗಾಂಧಿ ಅಜ್ಜನಿಗೆ ಒಂದು ಆಟವೇ, ಅಥವಾ ಪಾಠವೇ ಆಯಿತಲ್ಲಾ!"

"ಗಾಂಧಿ ಅಜ್ಜನಿಗೆ ಪಾಠವಾಗಲಿಲ್ಲ. ಜಗತ್ತಿಗೆ ಗಾಂಧಿ ಅಜ್ಜ ಹೊಸ ಪಾಠವನ್ನು ಕಲಿಸಿಕೊಟ್ಟರು ಎನ್ನಬಹುದು."

"ಜೈಲಿನೊಳಗೆ ಕೂತು ಈ ರೀತಿ ಮಾಡುವುದಕ್ಕೆ ಗಾಂಧಿ ಅಜ್ಜನಿಗೆ ಎಲ್ಲಿಂದ ಧೈರ್ಯ ಬಂದಿತೋ? ಅದ್ಭುತ ಸಾಹಸ."

"ಗಾಂಧಿ ಅಜ್ಜನ ಅತಿ ಮಾನುಷ ಶಕ್ತಿಯ ಅರಿವು ಈ ಹೊತ್ತಿಗೆ ಸರಕಾರಕ್ಕೆ ತಿಳಿಯದೆ ಹೋಗಲಿಲ್ಲ. ಸರಕಾರದ ಶಕ್ತಿ ಕುಗ್ಗಿತು. ಗಾಂಧಿ ಅಜ್ಜನಿಗೆ ಬಗ್ಗಿತು. ಗಾಂಧಿ ಅಜ್ಜನ ಬಿಡುಗಡೆಯೂ ಆಯಿತು"

"ಸಾಮ್ರಾಜ್ಯಶಾಹಿಗಳನ್ನೂ ಕೂಡ ಉಪವಾಸದಿಂದಲೇ ಗಾಂಧೀಜಿ ಗೆದ್ದರೆಂದರೆ ಅವರ ಶಕ್ತಿ ಸಾಮಾನ್ಯವಾದುದೇನು?"

"ಅಸಾಮಾನ್ಯವೇ! ಗಾಂಧಿ ಅಜ್ಜ ಆ ಬಳಿಕ ಭಾರತದ ಉದ್ಧಾರಕ್ಕೆ ಹರಿಜನರ ಉದ್ಧಾರ ಅಗತ್ಯವೆಂದು ತಿಳಕೊಂಡರು"

"ಅಣ್ಣಾ! ಗಾಂಧಿ ಅಜ್ಜ ಹರಿಜನೋದ್ಧಾರಮಾಡಲು ಹೊರಟು ಜನರ ನಿಂದೆಗೆ ಪಾತ್ರರಾದರಲ್ಲವೇ?"

"ಅದರಲ್ಲಿ ಆಶ್ಚರ್ಯವೇನು? ವಿಚಿತ್ರವಲ್ಲ. ನಮ್ಮಜ್ಜನ ತತ್ವದ ಅರಿವು ನಮ್ಮ ಜನತೆಗುಂಟಾಗಲಿಲ್ಲ. ಆದ್ದರಿಂದಲೇ ಗಾಂಧಿ ಅಜ್ಜನ ತತ್ವ ಸರಿತೋರಲಿಲ್ಲ. 'ಮುಡಿಮುಡಿ ಎಂದು ಮಾರುದ್ದ ಹಾರುತಿ, ಕರ್ಮದಿಂದಲೆ ಜಾತಿ' ಎಂದು ಅನೇಕರು ವಿವೇಕದ ಮಾತನ್ನೊರೆದಿದ್ದರೂ ಅದು ಕಿವಿಗೆ ಬೀಳಲಿಲ್ಲ. ಭಾರತವು ಸ್ವಾರ್ಥಾಂಧಕಾರದಲ್ಲಿ ಬಿದ್ದು ನರಳುತ್ತಿತ್ತು. ಎಲ್ಲರೂ ಮನುಷ್ಯರು; ನಮ್ಮದು ಮಾನವ ಕುಲ, ಮನುಷ್ಯ ಜಾತಿ ಎನ್ನುವಾಗ ವಿಚಿತ್ರವಾಗಿ ಕಂಡಿರಬಹುದು ಅದಕ್ಕೇನು ಮಾಡಲಿ?"

"ಅಣ್ಣಾ! ಸರಿ. ಎಲ್ಲಿ ಹುಟ್ಟಿದರೇನಂತೆ, ಉಚ್ಚ ಕುಲದಲ್ಲಿ ಹುಟ್ಟಿದವನೂ ಕೀಳಾಗಿ ಬಾಳುವೆ ಮಾಡುವುದಿಲ್ಲವೇ?"

"ತಮ್ಮಾ! ಮನುಷ್ಯನಾಗಿ ಹುಟ್ಟಿದ ಮೇಲೆ ಎಲ್ಲರಿಗೂ ವಿವೇಕ ಅಗತ್ಯ. ಹಿಂದುಳಿದ ಭಾರತೀಯ ಜನಾಂಗದವರನ್ನು ಮುಂದೆ ತರಬೇಕು; ಭಾರತದ ಉದ್ಧಾರವಾಗಬೇಕಾದರೆ ಭಾರತೀಯರು ವಿವೇಕಶಾಲಿಗಳಾಗಿರಬೇಕು; ಎಂದು ನಮ್ಮಜ್ಜ ತಿಳಕೊಂಡಿದ್ದರು"

"ಪ್ರತಿಯೊಬ್ಬನ ಉದ್ಧಾರಮಾಡುವುದೂ ನಮ್ಮಜ್ಜನ ಕರ್ತವ್ಯವಾಗಿತ್ತು. ಅಲ್ಲವೇನಣ್ಣ?"

"ಹೌದು, ಭಾರತದ ಪ್ರತಿಯೊಬ್ಬ ವ್ಯಕ್ತಿಯೂ ಸುಖಿಯಾಗಬೇಕು. ಪ್ರತಿಯೊಬ್ಬನ ಉದ್ಧಾರವಾದಾಗ ತಾನೆ ಸಂಪೂರ್ಣ ಭಾರತದ ಉದ್ಧಾರವಾಗುವುದು ಎಂದು ತಿಳಿದು, ಹಿಂದುಳಿದ ಮಂದಿಯನ್ನು ಮುನ್ನಡೆಸುವುದಕ್ಕೆ ಅವರು ಪಣತೊಟ್ಟರು"

"ಅಣ್ಣಾ! ನಾವು ನಿಜವಾಗಿಯೂ ಅವರ ತತ್ವಕ್ಕೆ ಬೆರಗಾಗುತ್ತೇವೆ. ಮನುಷ್ಯರು ಮನುಷ್ಯರನ್ನು ಮುಟ್ಟಬಾರದು ಎಂಬ ನಮ್ಮ ಹಾಳು ತತ್ವ ವಿಶ್ವಪ್ರೇಮಿಯಾದ ನಮ್ಮಜ್ಜನಿಗೆ ಹೇಗೆ ಸರಿ ಕಂಡೀತು?"

"ನಾವೆಲ್ಲಾ ಅಣ್ಣತಮ್ಮಂದಿರು. ನಮ್ಮ ಹಾಗೆಯೇ ಅವರು ಭಾರತದಲ್ಲಿ ಜನಿಸಿದರು. ನಮಗೆ ಭಾರತ ಹೇಗೆ ತಾಯಿಯೋ ಹಾಗೆಯೇ ಅವರಿಗೂ ತಾಯಿಯೇ. ನಮ್ಮ ಹುಟ್ಟಿಗೆ ಕಾರಣನಾದ ದೇವರು ಒಬ್ಬನೇ ಸರಿ. ನಾವೆಲ್ಲಾ ಒಂದು; ಭಿನ್ನಭಾವನೆ ಸಲ್ಲದು; ಎಂದು ನಮ್ಮಜ್ಜ ಬೋಧಿಸತೊಡಗಿದರು. ಹರಿಜನೋದ್ಧಾರ ಕಾರ್ಯಭರದಿಂದ ಸಾಗಿತು"

"ಅಣ್ಣಾ! ಬಿಳಿಯರು ಭಾರತೀಯರನ್ನು ಹೀನೈಸುತ್ತಿದ್ದಂತೆ ಉಚ್ಚ ವರ್ಣದ ಭಾರತೀಯರು ಹರಿಜನರನ್ನು ಹೀನೈಸುತ್ತಿದ್ದುದು ನಿಜವಾಗಿಯೂ ಅನ್ಯಾಯವೇ ಅಲ್ಲವೇ?"

"ಅದರಲ್ಲಿ ಎಳ್ಳಷ್ಟಾದರೂ ಸಂದೇಹವೇಕೆ? ಹಿರಿಯರು ಹೇಗೆ ಕಿರಿಯರ ಹಿತವನ್ನು ಸಾಧಿಸುವರೋ ಅದೇ ರೀತಿಯಲ್ಲಿ ಹಿಂದುಳಿದ ಜನಾಂಗದವರನ್ನು ಮುಂದಕ್ಕೆ ತರುವುದು ಮಾನವನ ಆದ್ಯ ಕರ್ತವ್ಯ; ಅದೇ ಮಾನವತೆಯ ಲಕ್ಷಣ ಎಂದು ಹೇಳಬಹುದು. ಸರಕಾರವು ಕೂಡ ಸ್ವಲ್ಪ ಈ ವಿಷಯದಲ್ಲಿ ಕಣ್ತೆರೆಯಿತು."

"ಅಣ್ಣಾ! ಗಾಂಧೀಜಿಯ ಮಾತಿಗೆ ಸರಕಾರ ಸೈಗುಟ್ಟಿತೇ?"

"ಸತ್ಯಕ್ಕೆ ಎಂದಿಗೂ ಗೆಲವು ಇದ್ದೇ ಇದೆ. ೧೯೩೭ರಲ್ಲಿ ಪ್ರಾಂತಿಕ ಸರಕಾರದ ಚುನಾವಣೆ ನಡೆದು ಗಾಂಧೀಜಿಯ, ಅಸ್ಪೃಶ್ಯತಾ ನಿವಾರಣೆ, ಮದ್ಯಪಾನ ನಿಷೇಧ, ಗ್ರಾಮೋದ್ಧಾರ, ಗುಡಿ ಕೈಗಾರಿಕೆ ಮೊದಲಾದ ಕಾರ್ಯಕ್ರಮಗಳಿಗೆ ಸರಕಾರವು ಪ್ರಾಮುಖ್ಯವನ್ನಿತ್ತಿತು."

"ಅಣ್ಣಾ! ಮದ್ಯ ಕುಡಿಯಬಾರದು ಎಂದು ಅಂದಿನಿಂದಲೇ ಗಾಂಧಿ ಅಜ್ಜ ಹೇಳತೊಡಗಿದ್ದರಲ್ಲವೇ?"

"ಗಾಂಧೀಜಿ ಅಂದೇ ಹೇಳಿದರು. ಸ್ವತಂತ್ರ ಭಾರತದಲ್ಲಿ ಈ ಕಾನೂನು ಜಾರಿಗೆ ಬಂದಿದೆ. ಆದರೆ ಅದು ಕೆಡುಕು ಎಂಬ ವಿವೇಕ ಇನ್ನೂ ಜನರಲ್ಲಿ ಸಂಪೂರ್ಣವಾಗಿ ಉಂಟಾಗಿಲ್ಲತಾನೆ?"

"ಅಮಲು ಕುಡಿದು ಹುಚ್ಚರಾಗಲು ಜನರು ಬಯಸುತ್ತಾರಲ್ಲಾ!"

"ಹೌದು, ಬೇಡವಾದ ಅಭ್ಯಾಸ ಬೇಗನೆ ಅಂಟಿಕೊಳ್ಳುತ್ತದೆ. ಬಿಡುವುದಕ್ಕೆ ಮನಸ್ಸು ಬರುವುದಿಲ್ಲ."

"ಅಣ್ಣಾ! ಅಮಲು ಕುಡಿದರೆ ಸ್ಫೂರ್ತಿ ಬರುತ್ತದೆ; ಶಕ್ತಿಯುಂಟಾಗುತ್ತದೆ; ಎಂದೆಲ್ಲಾ ಹೇಳುತ್ತಾರಲ್ಲವೇ?"

"ತಮ್ಮಣ್ಣಾ! ಹೌದೌದು, ಏಳಲಾರದ ಎತ್ತಿಗೆ ಬೆತ್ತತೆಗೆದು ಬೀಸಿದರೆ ಅದು ಓಡಿಹೋಗುವುದಲ್ಲವೇ? ಆಗ ಅದಕ್ಕೆ ಬಹಳ ಶಕ್ತಿ ಉತ್ಸಾಹ ಎಲ್ಲವೂ ಬಂದಹಾಗೆಯೇ ತಾನೆ?"

"ಅಣ್ಣಾ! ಇಷ್ಟು ಡೊಂಕಾಗಿ ಉತ್ತರ ಹೇಳುವುದು ಯಾಕೆ?"

"ಮನುಷ್ಯರ ಬುದ್ಧಿ ಹೆಚ್ಚಾಗಿ ಡೊಂಕಾಗಿಯೇ ಇರುತ್ತದೆ. ಆದ್ದರಿಂದಲೇ ಡೊಂಕಾಗಿ ನುಡಿದೆ?"

"ಆದರೆ ನಿಮ್ಮ ಹತ್ತಿರ ನಾನು ಯಾವ ಡೊಂಕು ಪ್ರಶ್ನೆ ಮಾಡಿದ್ದೇನೆ? ಯಾಕೆ ಹಾಗೆ ಹೇಳುತ್ತಾರೆಂದು ಕೇಳಿದೆ."

"ಬುದ್ಧಿಯಿಲ್ಲದೆ ಎಂಬುದನ್ನು ತಿಳಿಸಿದೆ"

"ಅಣ್ಣಾ! ನೀವು ಬಹು ಸುಲಭದಲ್ಲಿ ಸೋಲಿಸಿದಿರಿ"

"ತಮ್ಮಾ! ನೀನು ಬಹು ಸುಲಭದಲ್ಲಿ ಅಣ್ಣನನ್ನು ಸೋಲಿಸಿ ಸೋಲು ಒಪ್ಪಿಸಿಕೊಳ್ಳುವೆ ಅಲ್ಲವೇ?"

"ಅದೆಲ್ಲಾ ಇರಲಿ. ಮತ್ತೆ ನಮ್ಮಜ್ಜ ಏನು ಮಾಡಿದರು?"

"ಹರಿಜನರ ಉದ್ಧಾರವನ್ನು ಮಾಡಿ ಹಿಂದುಗಳೊಳಗಿನ ಭಿನ್ನಭಾವವನ್ನು ಹೋಗಲಾಡಿಸಿದರಲ್ಲದೆ ಹಿಂದೂ ಮುಸಲ್ಮಾನರ ಐಕ್ಯಕ್ಕಾಗಿಯೂ ಬಹಳ ಯತ್ನಪಟ್ಟರು"

"ಅಣ್ಣಾ! ನಮ್ಮಜ್ಜನಿಗೆ ಎಲ್ಲಾ ಧರ್ಮಗಳ ಮೇಲೂ ಬಹಳ ಗೌರವ ಅಲ್ಲವೇ?"

"ಹೌದು, ನಮ್ಮಜ್ಜ ಎಲ್ಲಾ ಧರ್ಮಗಳ ತತ್ವವನ್ನೂ ಚೆನ್ನಾಗಿ ಅಭ್ಯಾಸ ಮಾಡಿದ್ದರು. ಎಲ್ಲಾ ಧರ್ಮಗಳ ತತ್ವವನ್ನರಿತು ತನ್ನದೇ ಆದ ಹೊಸ ತತ್ವವನ್ನು ಜಗತ್ತಿಗೆ ಬೋಧಿಸಿದರು."

"ಗಾಂಧೀ ತತ್ವ ಹೊಸ ತತ್ವವೇ ಆಯಿತು!"

"ಹಿಂದುಗಳು ಮುಸಲ್ಮಾನರೆಂಬ ಭೇದ ಅವರಲ್ಲಿರಲಿಲ್ಲ. ಕುರಾನು ಬೈಬಲ್ ಮೊದಲಾದ ಇತರ ಮತಗಳ ಧರ್ಮಗ್ರಂಥಗಳನ್ನು ಬಹಳ ಆದರ ದಿಂದ ಓದುತ್ತಿದ್ದರು. ಅದರಲ್ಲಿ ಉತ್ತಮವಾಗಿ ಕಂಡುದನ್ನು ಅವರು ದಿನನಿತ್ಯ ಪ್ರಾರ್ಥನಾ ಸಮಯದಲ್ಲಿ ಹಾಡುತ್ತಿದ್ದರು. 'ಮನುಷ್ಯನು ಗುಣ ಸಂಪನ್ನನಾಗಿರಬೇಕು. ಸತ್ಯ ಸದಾಚಾರವೇ ಅವನ ಧರ್ಮ' ಎಂದು ಅವರ ನಂಬುಗೆಯಾಗಿದ್ದಿತು."

"ಕಾಡುಮೃಗಗಳ ಹಾಗೆ ದ್ವೇಷ ಸಲ್ಲದು ಎಂದವರು ನಮ್ಮಜ್ಜ. ಆದರೂ ನಮ್ಮಜ್ಜನ ಮಾತು ಕೆಲವರಿಗೆ ಸರಿಹೋಗುತ್ತಿರಲಿಲ್ಲ. ಅಲ್ಲವೇ?"

"ಹೇಳಿದ್ದನ್ನು ಸರಿಯಾಗಿ ತಿಳಿದುಕೊಳ್ಳದೆ ಗಾಂಧಿ ಅಜ್ಜನನ್ನು ಹುಚ್ಚ ಎಂದವರೂ ಇದ್ದಾರೆ. ಭಾರತದ ದುಃಸ್ಥಿತಿಗೆ ಬಿಕ್ಕಟ್ಟೇ ಕಾರಣ. ಹಿಂದು ಮುಸ್ಲಿಮರು ಒಂದಾಗಬೇಕು ಎಂದು ಮುಸ್ಲಿಂಲೀಗಿನ ಅಧ್ಯಕ್ಷರಾದ ಜಿನ್ನಾ ಸಾಹೇಬರ ಭೇಟಿ ಮಾಡಿದರು. ಆದರೆ ಅದು ಫಲಕಾರಿಯಾಗಲಿಲ್ಲ."

"ಯಾವಾಗ ನೋಡಿದರೂ ಅಲ್ಲೀ ಇಲ್ಲೀ ಓಡಿ ದೇಶೋದ್ಧಾರವೆಂದು ದುಡಿಯುತ್ತಿರುವ ನಮ್ಮಜ್ಜನಿಗೆ ಬೇಸರ ತಲೆದೋರಲಿಲ್ಲವೇ?"

"ಸಹಜವಾದ ಪ್ರಶ್ನೆ. ತನಗೆ ಲಾಭ ಸಿಗದ ಕೆಲಸವನ್ನು ಯಾರೂ ಅಷ್ಟು ಆತುರದಿಂದ ಮಾಡುವಂತಿಲ್ಲ. ಭಾರತವೇ ಗಾಂಧಿ ಅಜ್ಜನ ಮನೆ. ಭಾರತದ ಕ್ಷೇಮವೇ ಅವರ ಕ್ಷೇಮ."

"ಅಂತೂ ಗಾಂಧಿ ಅಜ್ಜನ ತತ್ವವನ್ನು ಅನುಸರಿಸುವುದು ಬಹು ಪ್ರಯಾಸದ ಕೆಲಸವೇ ಸರಿ."

"ಪ್ರಯಾಸದ ಕೆಲಸವನ್ನು ಸಾಧಿಸಿದರೆ ಮಾತ್ರ ಅದನ್ನೊಂದು ಸಾಹಸವೆಂದು ಒಪ್ಪಿಕೊಳ್ಳಬಹುದು. ಇರುವೆಯನ್ನು ಮನುಷ್ಯನು ಕೊಂದ

ನೆಂಪರೆ ಅದನ್ನು ಯಾರಾದರೂ ಕಂಡು ಮಹಾಸಾಹಸವೆಂದು ಹೊಗಳುವ ರೇನು? ಗಾಂಧಿ ಅಜ್ಜ ಭಾರತದ ಬಡಸೋದರರಿಗಾಗಿ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಮತ್ತೂ ಅನೇಕ ಬಾರಿ ಅವರು ಉಪವಾಸ ಕೈಗೊಳ್ಳಬೇಕಾಯಿತು."

"ನಮ್ಮಜ್ಜ ಒಂದಲ್ಲ ಒಂದು ರೀತಿಯಿಂದ ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವ ಚಮತ್ಕಾರ ಶ್ರದ್ಧೆ ಎಲ್ಲವೂ ಹೊಸತೇ ಸರಿ. ಎಷ್ಟು ಉಪವಾಸವಣ್ಣಾ ಇದು!"

"ಯಾವ ಕೆಲಸವೇ ಇರಲಿ. ತೊಡಗಿದ ಕಾರ್ಯವನ್ನು ಅರ್ಧದಲ್ಲಿ ಬಿಡುವುದಕ್ಕಾಗುತ್ತದೇನು? ಅಷ್ಟರಲ್ಲೇ ದ್ವಿತೀಯ ಮಹಾಯುದ್ಧವು ಪ್ರಾರಂಭವಾಯಿತು."

"ಹಿಟ್ಲರನ ಯುದ್ಧ, ಹೆರ್ ಹಿಟ್ಲರ್, ಸರ್ವಾಧಿಕಾರಿ ಹಿಟ್ಲರ್, ರಣಭೇರಿ ಹೊಡೆದನಲ್ಲವೇ? ಹೋಲೆಂಡಿನ ಮೇಲೆ ಬಾಂಬು ಬಿತ್ತು ಅಲ್ಲವೇ ನಣ್ಣ!"

"ಹೌದು, ಹಿಟ್ಲರನ ಭಯಂಕರ ಯುದ್ಧ ಪ್ರಾರಂಭವಾಯಿತು. ಎಲ್ಲರ ಬಾಯಲ್ಲೂ ಹಿಟ್ಲರನ ಸುದ್ದಿಯೇ?"

"ಅಣ್ಣಾ! ಹಿಟ್ಲರನು ಮಹಾಸಾಮರ್ಥ್ಯ ಶಾಲಿಯೇ ಸರಿ."

"ತಮ್ಮಾ! ಹಿಟ್ಲರನು ಸಾಮರ್ಥ್ಯ ಶಾಲಿ ನಿಜ. ಇಡೀ ಜಗತ್ತನ್ನು ನುಂಗ ಬಯಸಿದ್ದರಿಂದಲೇ ಅವನು ಹಾಳಾದನು. ಶಾಂತಿಯಿಂದ ಜಗತ್ತನ್ನು ಹೇಗೆ ಗೆಲ್ಲಬಹುದೆಂಬುದಕ್ಕೆ ನಮ್ಮಜ್ಜ ದೃಷ್ಟಾಂತವಾದರೆ, ಹಿಂಸಾ ಮಾರ್ಗದಿಂದ ಯಾವ ವಿಪತ್ತಿಗೊಳಗಾಗಬೇಕಾಗುವುದೆಂಬುದಕ್ಕೆ ಹಿಟ್ಲರನೇ ನಿದರ್ಶನವಾಗಬಹುದು."

"ಅಣ್ಣಾ! ಹಿಟ್ಲರನ ರಾಜ್ಯದಲ್ಲಿ ಮಕ್ಕಳನ್ನೆಲಾ ಹಿಟ್ಲರನಿಗೆ ಕೊಡಬೇಕಾಗಿತ್ತಂತೆ ಎಂದು ಕೆಲಮಂದಿ ಹೇಳುವುದನ್ನು ಕೇಳಿದ್ದೇನೆ. ಇದು ಸತ್ಯವೇನು?"

"ಅದೆಲ್ಲಾ ಸುಳ್ಳು. ಪರಕೀಯ ಸರಕಾರದ ಭಕ್ತ ಶಿಖಾಮಣಿಗಳೆನಿಸಿದ ಸರಕಾರೀ ನೌಕರರು ಯುದ್ಧಕ್ಕೆ ಸಹಾಯ ಕೇಳುವುದಕ್ಕಾಗಿ ಅಲ್ಲಸಲ್ಲದ ಆರೋಪ ಕಟ್ಟು ಕತೆಗಳನ್ನೆಲ್ಲಾ ಹೇಳುತ್ತಿದ್ದರು. ಅಷ್ಟೆ."

"ಅಣ್ಣಾ! ಸರಕಾರಕ್ಕೆ ಭಾರತದ ಜನ ಬೇಡವಾದರೂ ಭಾರತದ ಸಹಕಾರ ಅಗತ್ಯ ಅಲ್ಲವೇ?"

"ತಮ್ಮಾ! ಸ್ವಾರ್ಥಿಗಳ ಕತೆ ಅವಸ್ಥೆ ಸದಾ ಹೀಗೆಯೇ ಇರುತ್ತಿದೆ."

"ಅಣ್ಣಾ! ನಮ್ಮಜ್ಜ ಯುದ್ಧಕ್ಕೆ ಸಹಾಯ ಮಾಡಿ ಸಿಕ್ಕಿದ ಪದಕಗಳನ್ನೆಲ್ಲಾ ಹಿಂತಿರುಗಿಸಿದ್ದರಲ್ಲವೇ? ಈ ಬಾರಿ ಏನು ಮಾಡಿದರು?"

"ತಮ್ಮಾ! ಅದನ್ನೇ ಮುಂದೆ ಹೇಳಲಿದ್ದೇನೆ. ಈ ಬಾರಿ ನಮ್ಮಜ್ಜ ಯುದ್ಧಕ್ಕೆ ಸಹಾಯ ಮಾಡಲಿಲ್ಲ. ಕಾಂಗ್ರೆಸ್ ಬ್ರಿಟಿಷ್ ಸರಕಾರಕ್ಕೆ ವಿರೋಧವಾಗಿ ನಿಂತಿತು. ನಮ್ಮ ಹಕ್ಕು ನಮಗೇ ಸಿಕ್ಕಬೇಕೆಂದಿತು?"

"ಈ ಹೊತ್ತಿಗೆ ಸರಕಾರಕ್ಕೆ ಬಹು ಕಷ್ಟವಾಗಿರಬಹುದಲ್ಲವೇ?"

"ಬಂಡವಾಳಶಾಹಿಗೆ ಬಂದ ಕಷ್ಟಕ್ಕಿಂತಲೂ ಬಡ ಭಾರತೀಯರಿಗೆ ಬಂದ ವಿಪತ್ತೇ ದೊಡ್ಡದಲ್ಲವೇ?"

"ಅಂದರೆ ಎಂಥಾ ವಿಪತ್ತು ಬಂತಣ್ಣಾ!"

"ಯಾರಿಗೋ ಯುದ್ಧವಂತೆ. ನಮ್ಮವರ ಬಲಿಯಂತೆ. ಇದಕ್ಕೆ ಅರ್ಥವೇನು? ಯುದ್ಧಕ್ಕೆ ನಮ್ಮ ಜನರನ್ನು ಕಳುಹಲಾಯಿತು. ಬ್ರಿಟಿಷರ ಕುತಂತ್ರಕ್ಕೆ ಎಲ್ಲೆಯಿದೆಯೇ?"

"ಅಣ್ಣಾ! ಭಾರತೀಯರನ್ನೆಲ್ಲಾ ಯುದ್ಧಕ್ಕೆ ಕಳುಹಿದರೇ?"

"ಭಾರತವು ಅವರ ಅಧೀನದಲ್ಲಿದೆ ತಾನೆ. ನಮ್ಮವರನ್ನು ಯುದ್ಧಕ್ಕೆ ಕಳುಹಿದರು. ನಾವು ಈ ಯುದ್ಧವನ್ನು ಬ್ರಿಟಿಷರೊಂದಿಗೆ ಸೇರಿ ವಿರೋಧಿಸುತ್ತೇವೆಂದು ನಮ್ಮಲ್ಲಿ ಕೇಳದೆ ಸಾರತೊಡಗಿದರು . ಭಾರತೀಯರೆಂದರೆ ಅವರ ಕೈಗೊಂಬೆಗಳಲ್ಲ. ಪ್ರಜಾಪ್ರಭುತ್ವ ನಮಗೆ ಬೇಕು ಎಂದು ಕಾಂಗ್ರೇಸ್ ಸಾರತೊಡಗಿತು"

"ಆದರೆ ಮತ್ತೇನಾಯಿತು?"

"ಭಾರತೀಯರು ಜರ್ಮನಿಯ ಮೇಲೆ ಸ್ವಾತಂತ್ರ್ಯಕ್ಕಾಗಿ ಹೋರಾಡುವುದೆಂದು ಸಾರಿದ ಬ್ರಿಟಿಷರ ಮಾತು ಸುಳ್ಳು ಎಂಬುದನ್ನು ಪ್ರಪಂಚಕ್ಕೆ ತೋರಿಸಿಗೊಟ್ಟಿತು. ಇದನ್ನು ಯೋಚಿಸುವ ಹಕ್ಕು ನಮಗಿಲ್ಲವೇ? ಆಯಾ

ಪ್ರಾಂತಗಳಲ್ಲಿನ ಮಂತ್ರಿಮಂಡಲ ಪ್ರಾಂತ್ಯದ ಗವರ್ನರರಿಗೆ ತನ್ನ ಅಧಿಕಾರವನ್ನೊಪ್ಪಿಸಿ ರಾಜಿನಾಮೆ ಕೊಟ್ಟಿತು."

"ಪಾಪ! ಬ್ರಿಟಿಶರಿಗೆ ದಂಗುಬಡಿದಂತಾಗಿರಬಹುದು. ಎಲ್ಲಿಡೆಯೂ ವೈಯಕ್ತಿಕ ಚಳವಳವಾಯಿತೇ?"

"ಭಾರತೀಯರು ಬಿಡುವರೇ?"

"ಅಣ್ಣಾ! ಇದನ್ನು ಕೇಳುವಾಗಲೇ ಮೈ ಝುಮ್ಮೆನ್ನುತ್ತದೆ."

---

— ೧೧ —

"ತಮ್ಮಣ್ಣಾ! ನಮ್ಮಜ್ಜ ಭಾರತೀಯರ ಜೀವದ ಹಾಗೆಯೇ ಆಗಿಬಿಟ್ಟರಲ್ಲವೇ? ಅವರು ಎಂದ ಮಾತು ಅಮೃತವಾಣಿ ಎನ್ನುವ ಹಾಗಾಯಿತಲ್ಲಾ!"

"ಹೌದಣ್ಣಾ! ನನಗೆ ಬಹು ಆಸೆಯಾಗುತ್ತದೆ. ಈಗಲೂ ನಮ್ಮಜ್ಜ ಜೀವಂತ ಇದ್ದು ನನ್ನ ಹತ್ತಿರ ಅವರು ಏನು ಮುದ್ದು ಎಂದು ಕೇಳಿದ್ದರೆ ನನಗೆ ಎಷ್ಟು ಸಂತೋಷವಾಗುತ್ತಿತ್ತು ಗೊತ್ತೇ? ಅಣ್ಣಾ! ಗಾಂಧಿ ಅಜ್ಜ ಮುದುಕ ಆಗಿದ್ದರೂ ಫೊಟೋದಲ್ಲಿ ಅವರ ಮುಖ ನೋಡಿದರಣ್ಣಾ ನನಗೆ ಎಷ್ಟು ಸಂತೋಷವೋ ನನಗೇ ತಿಳಿಯದು. ಮುದ್ದು ಮಕ್ಕಳಿಗಿಂತ ಚಂದವಾಗಿ ನಗುತ್ತಾರೆ."

"ಅವರ ಹೃದಯವನ್ನು ಅವರ ಮುಖವೇ ವ್ಯಕ್ತಪಡಿಸುತ್ತಿತ್ತು. ಎಷ್ಟು ಕೋಮಲ ನಮ್ಮಜ್ಜನ ಹೃದಯ, ಎಷ್ಟು ವಿಶಾಲ ಎಂದು ನಿನಗೇನು ನನಗೂ ಕಲ್ಪನೆಗೆ ಬಾರದು ತಮ್ಮಾ!"

"ಅಣ್ಣಾ! ಅವರು ಈಗ ನಿಜವಾಗಿ ಇರಬೇಕಿತ್ತು, ನಾನು ಹೇಗಾದರೂ ಮಾಡಿ ಒಂದುಬಾರಿ ಗಾಂಧಿ ಅಜ್ಜ ಇದ್ದಲ್ಲಿಗೆ ಓಡಿಹೋಗಿ ಕಾಲಿಗಡ್ಡ ಬಿದ್ದು ಅವರನ್ನಪ್ಪಿಕೊಳ್ಳುತ್ತಿದ್ದೆ."

"ತಮ್ಮಾ! ಈಗ ಅದನ್ನೆಲ್ಲಾ ಯೋಚಿಸಿ ಮಾಡುವುದೇನು? ಅವರು ಹುಟ್ಟಿದ ದೇಶದಲ್ಲಿ ನಾವು ಹುಟ್ಟಿದ್ದೇ ನಮ್ಮ ಭಾಗ್ಯ ಎಂದೆಣಿಸಬೇಕು."

"ಅಣ್ಣಾ! ನಮ್ಮಜ್ಜ ಹುಟ್ಟಿದ ಪಾವನ ಭೂಮಿ ಭಾರತದಲ್ಲಿ ಇರುವೆಯಾಗಿ ಹುಟ್ಟಬೇಕಾದರೂ ಪುಣ್ಯಮಾಡಲೇ ಬೇಕು."

"ತಮ್ಮಾ! ಅದಿರಲಿ, ದೇಶದ ಉದ್ಧಾರ ಮಾಡುವ ಒಬ್ಬ ವ್ಯಕ್ತಿ, ಭಾರತದ ಧುರೀಣ ಎಂದೆನ್ನಿಸಿಕೊಂಡರು. ಅವರ ಉಡುಗೆ ಎರಡೇ ಎರಡು ಬಟ್ಟೆ. ಆಹಾರವೋ ಅತ್ಯಲ್ಪ. ಸ್ವಲ್ಪ ಹಣ್ಣು ಹಾಲು ಇಷ್ಟೇ ಅವರ ಆಹಾರ. ದಿನಕ್ಕೆ ಸಾಮಾನ್ಯ ಹನ್ನೆರಡು ತಾಸುಗಳಷ್ಟು ದುಡಿಯುತ್ತಿದ್ದರು. ಅಂತೂ ವಿಚಿತ್ರ ಜೀವನವೇ ಸರಿ ಅವರದು."

"ಹಿಂದಿನ ಕಾಲದಲ್ಲಿ ದೇವರನ್ನು ಪ್ರತ್ಯಕ್ಷ ಮಾಡುವುದಕ್ಕಾಗಿ ಅನ್ನ ಆಹಾರ ಬಿಟ್ಟು ತಪಸ್ಸು ಮಾಡುತ್ತಿದ್ದರು ಎಂದು ಹೇಳಿದ್ದೀರಲ್ಲಾ! ಅದೇ ರೀತಿ ನಮ್ಮಜ್ಜ ದೇಶದ ಸ್ವಾತಂತ್ರ್ಯಕಾಗಿ ಆಜೀವ ತಪಸ್ಸು ಮಾಡುತ್ತಿದ್ದರು ಎಂದು ಹೇಳಬಹುದು ತಾನೆ?"

"ತಮ್ಮಾ! ನೀನು ಬಲು ಜಾಣ. ಎಷ್ಟು ಸೊಗಸಾಗಿ ವರ್ಣಿಸುವೆ!"

"ಸೊಗಸಾಗಿ ವರ್ಣಿಸಿ ಕತೆ ಹೇಳುವ ಅಣ್ಣನ ತಮ್ಮ ನಾನಲ್ಲವೇ? ಅದರಲ್ಲಿ ಏನೂ ಹೊಸತಿರಲಾರದು."

"ತಮ್ಮಾ! ನೀನು ರಸಿಕ. ಮುಂದಿನ ಕತೆ ಹೇಳಬೇಡವೇ?"

"ಮತ್ತೆ ಹೇಳದೆ ನಾನು ಬಿಡುವೆನೇ? ಗಾಂಧೀಜಿಯು ಸೇವಾಗ್ರಾಮ ಆಶ್ರಮ ಎಲ್ಲವೂ ಬಹಳ ಯಶಸ್ವಿಯಾಯಿತಲ್ಲವೇ?"

"ಗಾಂಧಿ ಅಜ್ಜ ತೊಡಗಿದ ಕಾರ್ಯ ಯಶಸ್ವಿಯಾಗದಿದ್ದೀತೇ? ಅವರು ಮುಟ್ಟಿದ್ದೆಲ್ಲಾ ಚಿನ್ನ ಎಂದು ಭಾಗ್ಯವಂತರ ಕೈಯನ್ನುದ್ದೇಶಿಸಿ ಹೇಳುತ್ತಾರಲ್ಲವೇ? ಅದೇ ರೀತಿ ನಮ್ಮಜ್ಜ ತೊಡಗಿದ ಕಾರ್ಯವೆಲ್ಲವೂ ಜಯಪ್ರದವೇ ಸರಿ. ಖಾದಿಯ ಪ್ರಚಾರ ಇವೆಲ್ಲವೂ ಗಾಂಧಿ ಅಜ್ಜನಿಂದಲೇ ಆದದ್ದಲ್ಲವೇ?"

"ಗಾಂಧಿ ಅಜ್ಜ ಮಾಡಿದ ಕೆಲಸಕ್ಕೆ ಲೆಕ್ಕದ ಮಿತಿಯೇ ಇಲ್ಲವಲ್ಲಾ! ನನ್ನಂಥಾ ಒಬ್ಬ ಹೆಡ್ಡನಿಗೆ ಅದನ್ನು ಜ್ಞಾಪಕದಲ್ಲಿಡುವುದಕ್ಕೂ ಶಕ್ತಿ ಸಾಲದು."

"ತಮ್ಮಣ್ಣಾ! ನನ್ನಂಥಾ ಮೂಕನಿಗೆ ಅದನ್ನು ಹೇಳಿತೀರಿಸುವುದೂ ಅಸಾಧ್ಯ."

"ಅಣ್ಣಾ! ನೀವು ಮೂಕರಾದರೆ ಇಷ್ಟೆಲ್ಲಾ ಹೇಳಿದ್ದು ಹೇಗೆ?"

"ನಾನು ಹೇಳಿದ್ದು ಬಹು ಕಡಮೆ. ಇದಕ್ಕಿಂತ ಸಾವಿರ ಪಾಲು ಗಾಂಧಿ ಅಜ್ಜ ದುಡಿದಿದ್ದಾರೆ. ಗಾಂಧಿ ಅಜ್ಜ ಹೇಳಿದ ಹಾಗೆ ಖಾದಿ ತಯಾರು ಮಾಡದೆ ಇರುತ್ತಿದ್ದರೆ ಯುದ್ಧದಿಂದಲಾಗಿ ಬಂದ ಬಟ್ಟೆಯ ತುಟ್ಟಿಯಿಂದ ನಾವು ಬತ್ತಲೆ ತಿರುಗಬೇಕಾಗುತಿದ್ದಿತು. ಮಾನ ಕಳೆದುಕೊಳ್ಳ ಬೇಕಾಗುತಿದ್ದಿತು"

"ಅಣ್ಣಾ! ಯುದ್ಧದ ಕತೆ ಅರ್ಧದಲ್ಲೇ ಬಿಟ್ಟುಹೋಯಿತಲಾ!"

"ಓಹೋ, ನಿನಗೆ ಯುದ್ಧದ ಕತೆ ಎಂದರೆ ಬಹಳ ಇಷ್ಟ ವಲ್ಲವೇ? ಕೇಳು. ವಿಮಾನವು ರುಮ್ಮನೆ ಹಾರಿತು. ಧಡಲ್ಲನೆ ಬಾಂಬು ಬಿದ್ದಿತು. ದಡಬಡೆಂದು ಸಿಡಿಯಿತು. ಗಡಬಡನೆ ಮನೆಮಾರುಗಳು ಬಿದ್ದವು, ಧಗಧಗನೆ ಬೆಂಕಿಯುರಿಯಿತು. ಈ ರೀತಿಯಾಗಿ ವರ್ಣಿಸಿ ಹೇಳಿದರೆ ಸಾಕೇ?"

"ಅಣ್ಣಾ! ಸಾಕು ಸಾಕು, ನಿಮ್ಮ ವರ್ಣನೆ, ವೈಯಕ್ತಿಕ ಚಳವಳ ಆಯಿತು. ಗಾಂಧಿ ಅಜ್ಜ ಮುಂದೇನು ಮಾಡಿದರೆಂದು ಹೇಳಿರಿ."

"ಯುದ್ಧ ಭಯಂಕರವಾಯಿತು. ಭಾರತೀಯರ ಚಳವಳವನ್ನು ತಡೆ ಯಲಾರದೆ ಸಾಮ್ರಾಜ್ಯಶಾಹಿಗೆ ತಲ್ಲಣವಾಯಿತು. ಸ್ಟೆಪರ್ಡ್ ಕ್ರಿಪ್ಸರು ಭಾರತದ ಧುರೀಣರೊಡನೆ ಸಂಧಿಯ ಮಾತೆತ್ತಿ ಯುದ್ಧಾನಂತರ ಸ್ವಾ ತಂತ್ರ್ಯವೀಯುವುದಾಗಿ ಹೇಳಿದರು"

"ಸಂಧಿಯಾಯಿತೇನಣ್ಣ?"

"ಭಾರತದ ಧುರೀಣರು ಇದಕ್ಕೊಪ್ಪಲಿಲ್ಲ. ಸಿಂಗಾಪೂರದಲ್ಲಿ ಘೋರ ಸಮರವಾಗಿ ಅದು ಜಪಾನೀಯರ ವಶವಾಯಿತು. ಇದೇ ಹೊತ್ತಿಗೆ ಭಾರತೀಯರನ್ನು ಆಸೆ ತೋರಿಸಿ ಮಕ್ಕಳಂತೆ ಮರುಳುಮಾಡ ಬಂದರೆ ಧುರೀಣರು ಒಪ್ಪುವರೇ? ಭಾರತದಿಂದ ಪಾಶ್ಚಾತ್ಯರು ತೊಲಗಲೇ ಬೇಕು; ಈ ಯುದ್ಧ ನ್ಯಾಯವಿರೋಧವಾದದ್ದು ಎಂದು ಸಾರಿದರು, ೧೯೪೨ರಲ್ಲಿ ದುಡಿಯುವೆವು ಇಲ್ಲವೆ ಮಡಿಯುವೆವು ಎಂಬ ನಿರ್ಧಾರವನ್ನು ಮಾಡಲಾಯಿತು. ಅಖಿಲ ಭಾರತ ಕಾಂಗ್ರೆಸ್ ಅಧಿವೇಶನವು ಆಗೋಸ್ಟ್ ಎಂಟು ೧೯೪೨

ರೆಂದು ಜರಗಿ "ಚಲೇಜಾವ್" (ಭಾರತದಿಂದ ತೊಲಗಿರಿ) ಎಂದು ಕಾಂಗ್ರೆಸ್ ಸತ್ಯಾಗ್ರಹ ಚಳವಳಿಗೆ ಮುಂದೆ ಬಂದಿತು. ದುಡಿಯುವೆವು ವಾಮಡಿಯುವೆವು. (Do or Die) ಎಂಬ ಭಾರತೀಯರ ನಿಶ್ಚಯವನ್ನು ಕಂಡು ಅರಿಯದಂತೆಯೇ ಸರಕಾರವು ದೇಶೀಯ ಮುಖಂಡರನ್ನು ಬಂಧಿಸಿತು. ಸಾವಿರಾರು ಮಂದಿ ಸೆರೆಮನೆಯನ್ನು ಸೇರಬೇಕಾಯಿತು"

"ಅಬ್ಬಾ! ಸರಕಾರ ಮಾಡುವ ಅನ್ಯಾಯಕ್ಕೂ ಒಂದು ಮಿತಿಬೇಕಲ್ಲ!"

"ನಾಯಕರ ಬಂಧನವಾದರೆ ಜನತೆ ಕಂಗೆಟ್ಟು ಶಾಂತವಾಗುವುದೆಂದು ಅವರು ಬಗೆದಿದ್ದರು. ಆದರೆ ಈ ಹೊತ್ತಿಗೆ ಜನತೆಯೂ ಚೆನ್ನಾಗಿ ಎಚ್ಚರಗೊಂಡಿದ್ದಿತು. ಹೆಂಗಸರು ಗಂಡಸರು ಎಂಬ ಭೇದವಿಲ್ಲದೆ ಎಲ್ಲರೂ ಈ ಸ್ವಾತಂತ್ರ್ಯಸಮರದಲ್ಲಿ ಧುಮುಕಿದರು. ಎಲ್ಲೆಡೆಯೂ ಮಹಾತ್ಮಾ ಗಾಂಧೀಕೀ ಜೈ ಎಂಬ ಕೂಗು ಕೇಳಿಸತೊಡಗಿತು!"

"ಆದರೆ ಎಲ್ಲರನ್ನೂ ಸೆರೆಮನೆಗೊಯ್ದರೇ?"

"ಮಹಾತ್ಮಾ ಗಾಂಧೀಕೀ ಜೈ ಎಂದು ಜಯಕಾರ ಮಾಡಿದೊಡನೆ ಮೊದಮೊದಲು ಬಂಧನವಾಗುತ್ತಿತ್ತು. ಸರಕಾರದ ಶಕ್ತಿ ಕುಗ್ಗಿಹೋಯಿತು. ಸೆರೆಮನೆ ತುಂಬಾ ಸತ್ಯಾಗ್ರಹಿಗಳು ತುಂಬಿಹೋದರು. ಅವರನ್ನು ಕೂಡಹಾಕುವುದಕ್ಕೆ ಜಾಗ ಸಾಲದಾಯಿತು. ಆ ಮೇಲೆ ಏನು ಹೇಳಿದರೂ ಕೇಳುವವರಿಲ್ಲವೆಂದಾಯಿತು."

"ಅಣ್ಣಾ! ನಮ್ಮ ಜನರಿಗೆ ಇಷ್ಟು ಧೈರ್ಯ ಬಂತೇ?"

"ಎಲ್ಲವೂ ಗಾಂಧಿ ಅಜ್ಜನ ದುಡಿತದ ಪರಿಶ್ರಮದ ಫಲದಿಂದ ಎನ್ನಬೇಕು. ಎಲ್ಲರಲ್ಲೂ ದೇಶಪ್ರೇಮ ಉಕ್ಕಿ ಹರಿಯುತ್ತಿದ್ದಿತು. ಸರಕಾರವು ಜನರನ್ನು ಶಿಕ್ಷಿಸುವುದಕ್ಕೆ ಯತ್ನಿಸಿತು. ಲಾಠಿಯ ಹೊಡೆತ ಗುಂಡಿನೇಟು ಬಡ ಜನತೆಯ ಮೇಲೆ ಬಿತ್ತು. ರಕ್ತಪಾತವಾಯಿತು."

"ಅಣ್ಣಾ! ಇದೇ ಹೊತ್ತಿಗೆ ಶಾಲೆಯ ಮಕ್ಕಳೂ ಚಳವಳ ಹೂಡಿದರಂತಲ್ಲವೇ?"

"ಹೌದು. ಅವರು ಇವರೆನ್ನದೆ ಎಲ್ಲರೂ ಮುಂದೆಬಂದರು. ಮಕ್ಕಳು ಮರಿಗಳು ಪೆಟ್ಟುತಿಂದರು. ಯುವಕರ ತಂಡವೂ ಎದ್ದು ಮುಂದೆ

ಬಂದಿತು. ಹಿಂಸಾ ರೂಪ ತಾಳಿತು. ಕೋರ್ಟು ಕಚೇರಿಗಳನ್ನು ಸುಟ್ಟರು. ರೈಲುಕಂಬಿ ಕಿತ್ತರು. ಅಂಚೆಕಟ್ಟೆಯನ್ನು ಸುಟ್ಟರು, ಭಾರತ ದಲ್ಲಿ ಹೇಳಿ ತೀರದ ಗಲಭೆಯೇ ಉಂಟಾಯಿತು. ಈ ಹೊತ್ತಿಗೆ ನಮ್ಮಜ್ಜ ಎಲ್ಲಿದ್ದರು ಗೊತ್ತೇ?"

"ನಮ್ಮಜ್ಜ ಜೈಲಿನಲ್ಲಿ?"

"ತಮ್ಮಾ! ನಿನಗೆ ಈಗ ಅಜ್ಜಿಯ ನೆನವು ಆಗುವುದಿಲ್ಲವೇ?"

"ಹೌದೌದು, ಮರೆತೇ ಬಿಟ್ಟೆ. ನಮ್ಮಜ್ಜಿ ಏನು ಮಾಡಿದರಣ್ಣಾ?"

"ಓಹೋ, ಈಗ ಅಜ್ಜಿಯ ಕತೆಯೂ ಬೇಕು ಅಲ್ಲವೇ?"

"ಅಣ್ಣಾ! ತಮ್ಮನನ್ನು ಸುಮ್ಮಗೆ ಕೆಣಕ-ಬೇಡಿರಿ!"

"ನಮ್ಮಜ್ಜಿ ನಮ್ಮಜ್ಜನೊಂದಿಗೆ ಜೈಲಿನಲ್ಲಿ."

"ಆಂ, ಅಜ್ಜಿ ಜೈಲಿನಲ್ಲಿ ಪಾಪ!"

"ತಮ್ಮಾ! ದೇಶದಲ್ಲಿ ಪುರುಷರಂತೆ ಸಮಾನ ಹಕ್ಕು ಸ್ತ್ರೀಯರಿಗೆ ಇಲ್ಲವೇ? ಅದರಲ್ಲೂ ನಮ್ಮಜ್ಜಿ ಸಾಮಾನ್ಯರೇನು? ನಮ್ಮಜ್ಜಿ ನಮ್ಮಜ್ಜ ನಂಥಾ ಆದರ್ಶ ದಂಪತಿಗಳು ಜಗತ್ತಿನಲ್ಲಿ ಸಿಕ್ಕುವ ಹಾಗಿಲ್ಲ. ನಮ್ಮಜ್ಜಿ ಕಸ್ತೂರಿ ಬಾ ದೇಶಕ್ಕಾಗಿ ನಮ್ಮಜ್ಜನೊಡನೆ ತಮ್ಮ ಜೀವನವನ್ನು ತ್ಯಾಗ ಮಾಡಿದರು. ಈ ಹೊತ್ತಿಗೆ ನಮ್ಮಜ್ಜ ಮತ್ತು ನಮ್ಮಜ್ಜಿ 'ಆಗಾಖಾನ' ಅರಮನೆಯಲ್ಲಿದ್ದರು."

"ಅಣ್ಣ! ಇದೇನು ಹೇಳುವುದು? ಜೈಲಿನಲ್ಲಿದ್ದರು ಎಂದು ಹೇಳಿ ದವರೂ ನೀವೇ? ಈಗ ಅರಮನೆಯಲ್ಲಿದ್ದರು ಎನ್ನುವವರೂ ನೀವೇ?"

"ತಮ್ಮಣ್ಣಾ! ಅಣ್ಣನಲ್ಲಿ ತಪ್ಪು ಆರೋಪಿಸಲು ನೀನು ಬಹಳ ಚುರು ಕಿರುವೆ."

"ಆದರೆ ನೀವು ಹಾಗೆ ಹೇಳಲಿಲ್ಲವೇ?"

"ಅವಸರ ಬೇಡ, ಹೇಳುತ್ತೇನೆ. ಅದು ಹೆಸರಿಗೆ ಮಾತ್ರ ಅರಮನೆ; ಅದು ಜೈಲೇ ಆಗಿದ್ದಿತು."

"ಅಷ್ಟು ನನಗೇನು ಗೊತ್ತು? ಕ್ಷೀರಸಾಗರ ಭಟ್ಟ ಎನ್ನುವ ಹಾಗೆ ಅದೂ ಒಂದು ಅರಮನೆ ಅಲ್ಲವೇ?"

"ಸರಿ. ದಾನಕೊಡದವ ದಾನಪ್ಪ ಆದ ಹಾಗೆ. ಸುಖ ಇಲ್ಲದ ಶಿಕ್ಷೆ ಅನುಭವಿಸುವ ಅರಮನೆಯೇ ಅದು. ತಮ್ಮಾ! ಗಾಂಧಿಅಜ್ಜ ಆ ಅರಮನೆ ಯಲ್ಲಿ ಕೈದಿಯಾಗಿರುವಾಗಲೇ ಇನ್ನೊಂದು ಕೆಲಸ ಮಾಡಿದರು."

"ಏನದು?"

"ನಾನು ಹೇಳುವುದಿಲ್ಲ ನೀನೇ ಹೇಳು."

"ಅಣ್ಣಾ! ನೀವು ಹಟ ಮಾಡಬಾರದು. ಬೇಗನೆ ಹೇಳಿರಿ."

"ಬೇಗನೆ ಥಟ್ಟನೆ ಹೇಳಬೇಕೆ?"

"ಹೌದು"

"ಹೆದರಬಾರದು"

"ಎಷ್ಟುದ್ದ ಮಾಡುತ್ತೀರಿ"

"ಉಪವಾಸ ಮಾಡಿದರು"

"ಅಬ್ಬಾ! ಗಾಂಧಿ ಅಜ್ಜ ಉಪವಾಸ ಮಾಡಿದ್ದಕ್ಕಿಂತಲೂ ನೀವು ಹೇಳಿದ್ದೇ ಬಹು ಚಮತ್ಕಾರವಣ್ಣಾ!"

"ಅಣ್ಣ ಹೇಳಿದ್ದಕ್ಕಿಂತ ಅಧಿಕವಾಗಿ ತಮ್ಮನ ವರ್ಣನೆಯಲ್ಲಿಯೇ ಚಮತ್ಕಾರ."

"ಯಾಕೆ ಉಪವಾಸ ಮಾಡಿದರು? ಹೇಳಿರಿ"

"ಗಾಂಧಿಅಜ್ಜ ೧೯೪೩ನೇ ಫೆಬ್ರವರಿ ಹತ್ತರಂದು ಇಪ್ಪತ್ತೊಂದು ದಿನದ ಈ ಉಪವಾಸಕ್ಕೆ ತೊಡಗಿದರು. ಭಾರತೀಯರ ಮೇಲೆ ಅತ್ಯಾಚಾರ ನಡೆಯುತ್ತಿದೆ, ಇದರ ಪರಿಣಾಮ ಭಯಂಕರವಾಗುವುದೆಂದು ಅದನ್ನು ತಡೆಗಟ್ಟಲಾಗಿ ಸರಕಾರಕ್ಕೆ ತಿಳಿಸಿ ಈ ಉಪವಾಸಕ್ಕೆ ತೊಡಗಿದರು.

"ಅಣ್ಣಾ! ಉಪವಾಸಕ್ಕೆ ಸರಕಾರ ಬೆದರಿತೇ?"

"ಗಾಂಧಿಅಜ್ಜನ ಉಪವಾಸ ಎಂದರೆ ಕೇಳಬೇಕೇನು? ಸರಕಾರ ಬೆದರುವ ಮಾತು ಮೂಲೆಗಿರಲಿ, ಜಗತ್ತೇ ಬೆದರಿಹೋಯಿತು. ಎಲ್ಲಾ ಕಡೆಯಿಂದಲೂ ಗಾಂಧೀಜಿಯನ್ನು ಉಳಿಸಿರೆಂದು ಕೇಳಿಕೊಂಡರು."

"ಶಹಭಾಸ್ ನಮ್ಮಜ್ಜ! ನನಗೆ ಬಹಳ ಹಿಗ್ಗುಂಟಾಗುತ್ತದಣ್ಣಾ! ಎಷ್ಟು ಸಂತೋಷ. ಮೈ ಏನೇನೋ ಆಗುತ್ತದೆ. ಪರಕೀಯರ ಮೇಲೆ ಸಿಟ್ಟು ಒಳಗೊಳಗೆ ಬರುತ್ತದೆ."

"ಸಿಟ್ಟು ಬರುತ್ತದೆ!"

"ಹೌದಣ್ಣಾ! ಮತ್ತೆ ಅವರು ಮಾಡುವುದು ಅನ್ಯಾಯವಲ್ಲವೇ? ನಮ್ಮಜ್ಜನಿಗೆಷ್ಟು ಕಷ್ಟಕೊಟ್ಟರು?"

"ಹೌದೋ ತಮ್ಮಾ! ಎಲ್ಲಾದರೂ ಪರಕೀಯ ಅಧಿಕಾರಿಗಳು ನಿನ್ನ ಎದುರು ಇರುತ್ತಿದ್ದರೆ ಏನುಮಾಡುತ್ತಿದ್ದೆ?"

"ಗುದ್ದಿ ಅವರ ಹಲ್ಲು ತೆಗೆಯುತ್ತಿದ್ದೆನಣ್ಣಾ?"

ಆದರೆ ನನ್ನ ತಮ್ಮ ಚಿಂತಿಲ್ಲ. ವೀರಶಿಖಾಮಣಿಯೇ ಸರಿ. ಈಗ ನಿನ್ನೆದುರು ಇರುವವನು ನಾನಲ್ಲವೇ? ನನ್ನ ಹಲ್ಲು ಗುದ್ದಿ ಮುರಿಯ ಲಾರೆಯಷ್ಟೆ!"

"ಅಣ್ಣನ ಹಲ್ಲು ಗುದ್ದಿ ಮುರಿಯುತ್ತೇನೇನು? ಅದರಲ್ಲೂ ನನ್ನಣ್ಣನ ಹಲ್ಲು ಛೀ ಛೀ"

"ಹಾಗಲ್ಲ. ಸಿಟ್ಟು ಬಂದರೆ ಮತ್ತೆ ಅಷ್ಟೆಲ್ಲಾ ವಿಚಾರಿಸುವುದಕ್ಕೆಡೆ ಯುಂಟೇ? ಭಯಂಕರ ಸಿಟ್ಟು ಬರುತ್ತದೆ ಎನ್ನುತ್ತಿ. ಕತೆಹೇಳುವ ನನ್ನ ಹಲ್ಲನ್ನೇ ನೀನು ತೆಗೆದರೆ ಎಂದು ನನಗೆ ಗಾಬರಿ, ಹಾಗೆಲ್ಲಾದರೂ ಮಾಡುವುದಾದರೆ ನಾನು ಈಗ ಕತೆಯನ್ನು ಅರ್ಧದಲ್ಲೇ ಬಿಟ್ಟು ಇಲ್ಲಿಂದ ಓಡಿ ಹೋಗುವೆ?"

"ಅಣ್ಣಾ! ಆದರೆ ತಮ್ಮನಿಗೆ ಹೆದರಿ ಓಡಿ ಹೋಗುವ ನೀವು,— ಬಹಳ ಧೈರ್ಯಶಾಲಿಗಳು, ಭಾರತವೀರರು ಎನ್ನಬಹುದಲ್ಲಾ!"

"ನಿನ್ನಂಥಾ ತಮ್ಮನು ಹೇಳಿಯೇ ಹೇಳುವನು"

"ಅಣ್ಣಾ! ಸಾಕು ನಿಮ್ಮ ತಮಾಷೆ. ಉಪವಾಸ ಮತ್ತೇನಾಯಿತು?"

"ಉಪವಾಸದ ಎರಡನೇ ವಾರದಲ್ಲಿ ಗಾಂಧಿ ಅಜ್ಜನ ದೇಹಸ್ಥಿತಿ ತುಂಬಾ ಕೆಟ್ಟುಹೋಯಿತು. ಉಪವಾಸ ನಿಲ್ಲಿಸಿರೆಂದು ಎಲ್ಲರೂ ಕೇಳಿ ಕೊಂಡಂತೆ ಉಪವಾಸ ನಿಲ್ಲಿಸಿದರು"

"ಅಣ್ಣಾ! ಉಪವಾಸ ಮಾಡುವಾಗ ನಮ್ಮಜ್ಜಿ ಬೇಡ ಎನ್ನಲಿಲ್ಲವೇ?"

"ಎಂದರೂ ಎಂದಿರಬಹುದು. ಅಜ್ಜಿ ಬೇಡವೆಂದರೆ ಅಜ್ಜ ಒಪ್ಪುವರೇ? ನಮ್ಮಜ್ಜಿ ಈ ಕಾಲದಲ್ಲಿ ಗಾಂಧಿ ಅಜ್ಜನ ಶುಶ್ರೂಷೆ ಮಾಡುತ್ತಿದ್ದರು. ಅವರ ಉಪವಾಸ ಮುಗಿಯುವುದರೊಳಗೆ ನಮ್ಮಜ್ಜಿಯ ದೇಹಸ್ಥಿತಿಯೇ ಕೆಟ್ಟುಹೋಗಿತ್ತು. ಆ ಬಳಿಕ ನಮ್ಮಜ್ಜ ಅವರ ಶುಶ್ರೂಷೆ ಮಾಡಿದರು"

"ನಮ್ಮಜ್ಜ ನಮ್ಮಜ್ಜಿ, ಬ್ರಹ್ಮ ಮಾಡಿದ ಜೋಡಿ ಬಹಳ ಸರಿಯಾಗಿದೆಯಲ್ಲಣ್ಣಾ!"

"ಹೌದು, ಅವರು ವಿಶ್ವಕ್ಕೆ ಆದರ್ಶದಂಪತಿಗಳು, ಅವರಿಂದಲೇ ಎಲ್ಲರೂ ಕಲಿತುಕೊಳ್ಳತಕ್ಕದು"

"ಅಂದರೆ ನೀವೂ ಈಗ ಅಭ್ಯಾಸ ಮಾಡುತ್ತೀರೇನಣ್ಣ?"

"ಹೂಂ. ನಿನಗೇಕೆ ಆ ಪ್ರಶ್ನೆ. ನಾನು ಕಲಿತರೂ ಕಲಿಯದಿದ್ದರೂ ಒಂದೇ. ನಿನಗೆ ಕಲಿಯಬೇಕೆಂಬ ಆಸೆಯೇ?"

"ಅಣ್ಣಾ! ಆ ಸುದ್ದಿ ಬಿಡೋಣ."

"ತಮ್ಮಾ! ನಿನಗೆ ಬಹಳ ತಮಾಷೆ."

"ಅಂದರೆ ದುಃಖ ಯಾರಿಗೆ?"

"ಗಾಂಧಿ ಅಜ್ಜನಿಗೆ?"

"ಗಾಂಧಿ ಅಜ್ಜನಿಗೆ ದೇಶಕ್ಕಾಗಿ ಕಷ್ಟ ಬರುವುದೇ ಸುಖವಲ್ಲವೇ?"

"ಅದಲ್ಲ ಈಗಿನ ಕತೆ. ನಮ್ಮಜ್ಜಿಯ ಆರೋಗ್ಯ ಕೆಟ್ಟು ಹೋಗಿ ಅವರು ಅಲ್ಲೇ ಪರಂಧಾಮವನ್ನೈದಿದರು."

"ಏನು ನಮ್ಮಜ್ಜಿ ದೇಶಕ್ಕಾಗಿ ಜೈಲಿನಲ್ಲೇ ಮೃತರಾದರೇ?"

"ಹೌದು. ಪುಣ್ಯಮಾತೆಯೆನಿಸಿ ಮಾತೃಭೂಮಿಯ ಬಂಧನ ವಿಮೋಚನೆಗಾಗಿ ಹೋರಾಡುತ್ತಾ ಕಾರಾಗೃಹದಲ್ಲೇ ಅವರು ಇಹಲೋಕ ಯಾತ್ರೆಯನ್ನು ಮುಗಿಸಿದರು."

"ಅಯ್ಯೋ! ನಮ್ಮಜ್ಜನಿಗೆ ಎಂಥಾ ವಿಪತ್ತು........?"

"ನಮ್ಮಜ್ಜಿಯ ಮರಣದಿಂದ ನಮ್ಮಜ್ಜನಿಗೆ ದುಃಖವಾಗದೆ ಇದ್ದೀತೇ? ಸತಿ ಕಸ್ತೂರಿ ಬಾಯಂಥಾ ಧರ್ಮಪತ್ನಿಯ ಕೈ ಹಿಡಿದ ನಮ್ಮಜ್ಜನೇ ಭಾಗ್ಯಶಾಲಿ. ನಮ್ಮಜ್ಜನಂಥಾ ಪತಿಯನ್ನು ಪಡೆದ ಮಾತೆ ಕಸ್ತೂರಜ್ಜಿ ಭಾಗ್ಯವಂತೆ ಎನ್ನಬೇಕು. ಅವರ ಆದರ್ಶಜೀವನ ಭಾರತದ ನರನಾರಿಯರಿಗೆ ವಿಕಾಸಲು, ಕಾರಾಗೃಹದಲ್ಲಿದ್ದ ನಮ್ಮಜ್ಜ ಆ ಬಳಿಕ ಏಕಾಂಗಿಯಾಗಿ ಚಿಂತಿಸಬೇಕಾಯಿತು. ಚಿಂತೆಯಿಂದಲಾಗಿ ಅವರ ಆರೋಗ್ಯ ಸಂಪೂರ್ಣ ಕೆಟ್ಟು ಹೋಯಿತು. ಮಲೇರಿಯ ಜ್ವರದಿಂದ ಕ್ಷೀಣಗೊಂಡರು. ಗಾಂಧಿ ಅಜ್ಜ ಅಲ್ಲೇ ಮೃತರಾದರೋ ಎಂಬ ಭಯದಿಂದ ಅವರನ್ನು ಸರಕಾರ ಜೈಲಿನಿಂದ ಬಿಡುಗಡೆ ಮಾಡಿತು."

"ಅಣ್ಣಾ! ನನಗೆ ನಮ್ಮಜ್ಜಿಯ ಮರಣದ ವಾರ್ತೆ ತುಂಬಾ ದುಃಖವುಂಟು ಮಾಡಿದೆ. ಈಗ ಒಂದು ಪ್ರಶ್ನೆಯೂ ಇದೆ. ಯುದ್ಧದಲ್ಲಿ ಹೋರಾಡಿ ಮಡಿದವರಿಗೆ ವೀರಸ್ವರ್ಗ ದೊರೆಯುವುದಂತೆ. ಅದೇ ರೀತಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಡಿದ ನಮ್ಮಜ್ಜಿಗೂ ವೀರಸ್ವರ್ಗವೇ ದೊರೆಯುವುದಲ್ಲವೇ?"

"ಅದಕ್ಕೆ ಅಷ್ಟೊಂದು ಯೋಚನೆಯೇ? ನಮ್ಮಜ್ಜಿಯ ಪಾದಧೂಳಿಯನ್ನು ದೇವಲೋಕದ ಸ್ತ್ರೀಯರು ಪಾವನವೆಂದು ತಲೆಗೆರಚಿಕೊಂಡಿರಬಹುದು."

"ಗಾಂಧಿ ಅಜ್ಜ ಬಿಡುಗಡೆಯಾಗಿ ಹೊರಬಂದು ಏನು ಮಾಡಿದರು?"

"ಗಾಂಧಿ ಅಜ್ಜ ಜೈಲನ್ನು ಬಿಟ್ಟುಬರಲು ಒಪ್ಪಲಿಲ್ಲ."

"ಏಕೆ ಒಪ್ಪಲಿಲ್ಲ?"

"ಇಷ್ಟರಲ್ಲೇ ಎಷ್ಟೋ ಮಂದಿ ಜೈಲಿನಲ್ಲೇ ಮೃತರಾದುದರಿಂದ ತಾನು ಹೊರಬರಲಾರೆನೆಂದು ಹಟಹಿಡಿದರು."

"ಅಬ್ಬಾ ನಮ್ಮಜ್ಜನ ಮನಸ್ಸೇ!"

"ಗಾಂಧಿ ಅಜ್ಜ ತಮ್ಮ ದೇಹಸ್ಥಿತಿ ಸುಧಾರಣೆಗೊಂಡ ಮೇಲೆ ಹಿಂದೂ ಮುಸ್ಲಿಮರ ಐಕ್ಯಕ್ಕಾಗಿ ಯತ್ನಿಸಿದರು. ಭಾರತವನ್ನು ಈ ಮೊದಲು ಆಳಿಕೊಂಡು ಬಂದಂತೆ ಮುಂದೆಯೂ ಆಳಿಕೊಂಡು ಬರುವುದು ಅಸಾಧ್ಯ

ವೆಂದು ತಿಳಿದು ಆಗಿನ ಗವರ್ನರರಾಗಿದ್ದ ಲೋರ್ಡ್ ವೇವಲರು ಗಾಂಧೀಜಿಯೊಡನೆ ಸಂಧಾನದ ಮಾತುಕತೆಗೆ ಪ್ರಾರಂಭಿಸಿದರು. ಭಾರತವು ಒಗ್ಗಟ್ಟಾಗಿರಬೇಕು. ಹಿಂದೂ ಮುಸ್ಲಿಮ್ ಎಂಬ ಭೇದವಿರಕೂಡದು ಎಂದು ನಮ್ಮಜ್ಜ ಬಹುವಾಗಿ ಯತ್ನಿಸಿದರೂ ಜಿನ್ನಾ ಸಾಹೇಬ್ ಹಿಂದುಗಳಿಗೆ ಹಿಂದುಸ್ಥಾನ, ಮುಸ್ಲಿಮರಿಗೆ ಪಾಕಿಸ್ಥಾನ ಎಂಬ ತಮ್ಮ ಡೊಂಕುಬುದ್ಧಿಯನ್ನು ಬಿಡಲಿಲ್ಲ"

"ಜಿನ್ನನಿಗೆ ಎಷ್ಟು ಸ್ವಾರ್ಥ"

"ಅವನಿಂದಲೇ ಮುಸ್ಲಿಮರು ಹಾಳಾದರು."

"ಅಣ್ಣಾ! ಮತ್ತೇನಾಯಿತು?"

"ಹಿಂದೂ ಮುಸ್ಲಿಮರ ಬಾಂಧವ್ಯಕ್ಕಾಗಿ ಶತಪ್ರಯತ್ನವಾಯಿತು. ಗಾಂಧೀಜಿಗೆ ಭಾರತವು ಇಬ್ಭಾಗವಾಗುವದಂತೂ ಸರಿತೋರದು. ಕಾಂಗ್ರೆಸ್ ಒಪ್ಪದು. ಆ ತರುವಾಯ ಬಂದ ವೈಸರಾಯರಾದ ಲೋರ್ಡ್ ಮೌಂಟ್ ಬೇಟನ್ ಕೂಡ ಜಿನ್ನರನ್ನು ಸಮಾಧಾನಪಡಿಸಲು ಯತ್ನಿಸಿದರು. ಆದರೆ ಫಲಕಾರಿಯಾಗಲಿಲ್ಲ"

"ಆದರೆ?"

"ಹಿಂದೂ ಮುಸ್ಲಿಮರೆಂಬ ವಿಷ ಬೀಜವನ್ನು ಬಿತ್ತಿ ಜಿನ್ನರು ಬೆಳೆಸಿಟ್ಟುದರಿಂದಲಾಗಿ ಜಾತೀಯ ಗಲಭೆಯುಂಟಾಯಿತು. ಕಲಕತ್ತೆಯಲ್ಲಿ ದಂಗೆಯೆದ್ದಿತು. ಅಲ್ಲಲ್ಲಿ ಗಲಭೆಯೆದ್ದಿತು. ರಾಜಕೀಯ ಕೈದಿಗಳನ್ನೆಲ್ಲಾ ೧೯೪೫ರಲ್ಲೇ ವೇವಲರಿಂದಲಾಗಿ ಬಿಡುಗಡೆಮಾಡಲಾಗಿದ್ದಿತು. ೧೯೪೬ರಲ್ಲಿ ಭಾರತದಲ್ಲಿ ಹೊಸ ಚುನಾವಣೆಯಾಯಿತು. ಎಂಟು ಪ್ರಾಂತಗಳಲ್ಲಿ ಕಾಂಗ್ರೆಸ್ಸೂ ಮೂರು ಪ್ರಾಂತಗಳಲ್ಲಿ ಮುಸ್ಲಿಂ ಲೀಗೂ ಆರಿಸಿಬಂದು ಆಡಳಿತೆ ಪಡೆಯಿತು. ನೆಹರುಗಳು ಪ್ರಧಾನಮಂತ್ರಿ ಪದವಿಯನ್ನು ಸ್ವೀಕರಿಸಿದ್ದರು."

"ಅಣ್ಣಾ! ಆದರೆ ಈ ದಂಗೆಯನ್ನೆಲ್ಲಾ ನಿಲ್ಲಿಸಲು ನೆಹರು ಕಷ್ಟಪಡಬೇಕಾಯಿತಲ್ಲವೇ?"

"ದುಡಿಯಲೇ ಬೇಕಷ್ಟೆ! ನಮ್ಮ ನಾಯಕ ನೆಹರು ಸಾಮಾನ್ಯ ಮೂರ್ತಿಗಳೆಂದು ಬಗೆದೆಯಾ? ಜಗದ ಗಂಡು ವೀರ ಸಿಂಹ ಅಲ್ಲವೇ ನಮ್ಮ ನಾಯಕ, ಪಂಡಿತ್ ನೆಹರು."

"ಅಣ್ಣಾ! ನಮ್ಮ ದೇಶದಲ್ಲಿ ಎಂತೆಂಥಾ ಮಹಾತ್ಮರೆಲ್ಲಾ ಜನ್ಮತಾಳಿದರು! ನಮ್ಮ ಪುಣ್ಯ!"

"ಅಂತೆಯೇ ಅಲ್ಪರೂ ಕಲಂಕಪ್ರಾಯರಾಗಿ ಹುಟ್ಟಿದರು."

"ಪ್ರಪಂಚವಲ್ಲವೇ? ಒಳ್ಳೆಯವರೂ ಕೆಟ್ಟವರೂ ಎಲ್ಲರೂ ಇರುತ್ತಾರೆ."

"ತಮ್ಮಾ! ಹಿಂದೂ ಮುಸ್ಲಿಂ ದಂಗೆ ಜೋರಾಯಿತು. ಮನೆಮಾರು ಭಸ್ಮವಾಗತೊಡಗಿತು. ನಮ್ಮಜ್ಜನಿಗೆ ತಡೆಯಲಾರದ ದುಃಖವಾಯಿತು. ಜಾತೀಯತೆಯ ಹುಚ್ಚು ಭಯಂಕರ ರೂಪ ತಾಳಿತು. ಯಾರಿಂದಲೂ ಅಣಗಿಸಲು ಸಾಧ್ಯವಾಗಲಿಲ್ಲ. ಮುಪ್ಪೇರಿದ ನಮ್ಮಜ್ಜ, ಈ ದ್ವೇಷ ಜ್ವಾಲೆಯನ್ನಾರಿಸುವುದಕ್ಕಾಗಿ ತನ್ನ ಜೀವವನ್ನು ಬಲಿದಾನ ಮಾಡಲು ಸಿದ್ಧರಾಗಿ ಭಯಂಕರ ಗಲಭೆ ನಡೆಯುತ್ತಿರಲು ಕಾಲ್ನಡೆಯಿಂದಲೇ ನೌಖಾಲಿಗೆ ಪ್ರಯಾಣ ಬೆಳೆಸಿದರು."

"ನಮ್ಮಜ್ಜನ ಪ್ರೀತಿ ಎಷ್ಟು ದೊಡ್ಡದೋ? ಪ್ರಪಂಚವನ್ನೇ ತನ್ನ ಮಕ್ಕಳಂತೆ ಕಾಣುವ ನಮ್ಮಜ್ಜನ ವರ್ತನೆ ಜಗತ್ತಿಗೇ ಅದ್ಭುತವಾದುದು."

"ಎಪ್ಪತ್ತೆಂಟು ವರ್ಷದ ಮುದುಕ ನಮ್ಮಜ್ಜ ಹಳ್ಳಿಯಿಂದ ಹಳ್ಳಿಗೆ ಶಾಂತಿಯ ಸಂದೇಶವನ್ನು ಸಾರುತ್ತಾ ಕಾಲ್ನಡೆಯಿಂದಲೇ ಸಾಗಿ ಶಾಂತಿ ಸ್ಥಾಪನೆ ಮಾಡಿದರು."

"ಗಾಂಧಿ ಅಜ್ಜನ ಮಾತಿಗೆ ಎಲ್ಲರೂ ಶಾಂತರಾದರೇ?"

"ನಮ್ಮಜ್ಜನ ಮಾತು ಅಷ್ಟು ಸತ್ವಶಾಲಿಯಾದುದು. ಅವರ ಕೋಮಲ ಹೃದಯದ ವಾತ್ಸಲ್ಯ ಪೂರ್ಣವಾದ ಶುಭಸಂದೇಶ ಕಲ್ಲನ್ನು ಕರಗಿಸಬಹುದು. ಕೊರಡನ್ನು ಚಿಗುರಿಸಬಹುದು. ಭೇದಭಾವನೆಯು ಗಾಂಧಿ ಅಜ್ಜನ ಮುಂದೆ ನಿಲ್ಲದು. ಬೆಳಕಿನ ಮುಂದೆ ಕತ್ತಲೆ ನಿಲ್ಲುವುದೆಂತು?"

"ಅಣ್ಣಾ! ಗಾಂಧಿ ಅಜ್ಜನಂತೆ ವಿಶ್ವಬಾಂದವ್ಯಕ್ಕಾಗಿ ಹೋರಾಡಿದ ಮಂದಿ ಜಗತ್ತಿನಲ್ಲಿ ಖಂಡಿತವಾಗಿ ಬೇರೆ ಇನ್ನಾರು?"

"ಅಂಥವರು ಒಬ್ಬರೇ! ಅವರೇ ನಮ್ಮಜ್ಜ. ಭಾರತಕ್ಕೆ ಗಾಂಧೀಜಿಯ ಹೋರಾಟದ ಫಲವಾಗಿ ಗಾಂಧೀಜಿಯ ಆಸೆಯಂತೆಯೇ ಅಲ್ಲವಾದರೂ ಭಾರತವು ಇಬ್ಭಾಗವಾಗಿ ೧೯೪೭ನೇ ಅಗೋಸ್ಟ್ ಹದಿನೈದರಂದು ಸ್ವಾತಂತ್ರ್ಯ ದೊರಕಿತು. ಭಾರತವನ್ನು ಇನ್ನು ತನ್ನ ಅಂಕೆಯಲ್ಲಿಡುವುದು ಅಸಾಧ್ಯ ವೆಂದು ಸರಕಾರಕ್ಕೆ ಕಂಡು ಹೋಗಿತ್ತು. ಹಿಂದೂಸ್ಥಾನ ಪಾಕೀಸ್ಥಾನ ಈ ವಿಭಾಗದಿಂದಲಾಗಿ ಗಾಂಧೀಜಿಗೆ ತೃಪ್ತಿಯುಂಟಾಗಲಿಲ್ಲ. ಈ ವಿಭಾಗದ ಕಾರಣದಿಂದ ತುಂಬಾ ಗಲಭೆಯು ಉಂಟಾಯಿತು. ಇಬ್ಭಾಗವಾದರೂ ಹಿಂದುಗಳು ಮುಸಲ್ಮಾನರು ಬೇರೆ ಬೇರೆಯಲ್ಲ ಒಂದೇ ಎಂದು ನಮ್ಮಜ್ಜ ಸಾರುತ್ತಿದ್ದರು."

"ಅಣ್ಣಾ! ಹಿಂದು ಮುಸಲ್ಮಾನ ಕ್ರೈಸ್ತ ಎಂಬ ಭೇದವಿಲ್ಲದೆ ಮಾನವ ಜನಾಂಗಕ್ಕೇ ಬೋಧನೆಯಿತ್ತ ಜನಾಂಗದ ಉದ್ಧಾರ ಗೈದ ಮಹಾತ್ಮನನ್ನು ಜಗತ್ತೇ ಕೊಂಡಾಡುತ್ತದೆಯಲ್ಲವೇ?"

"ಜಗತ್ತು ಕೊಂಡಾಡಲೇ ಬೇಕು. ಭಾರತಕ್ಕೆ ಸ್ವಾತಂತ್ರ್ಯ ದೊರೆತ ತರುವಾಯ ಉಂಟಾದ ಜಾತೀಯ ದಂಗೆಯನ್ನು ಶಾಂತಗೊಳಿಸಲು ನಮ್ಮಜ್ಜ ನಿರಶನ ವ್ರತ ಹಿಡಿಯಬೇಕಾಯಿತು. ಮುಸಲ್ಮಾನರು ಹಿಂದುಗಳಿಗೆ ತೊಂದರೆ ಕೊಡುತ್ತಾರೆಂದು ಹಿಂದುಗಳೂ ಮುನಿದರು. ದೊಡ್ಡ ಗಲಭೆಯಾಯಿತು. ನರನಾರಿಯರ ಮಾನಭಂಗವಾಯಿತು. ಮಕ್ಕಳು ಮರಿಗಳನ್ನು ಮನೆಯಲ್ಲಿ ಬೆಂಕಿಗೆ ಆಹುತಿ ಕೊಟ್ಟರು. ಇದನ್ನೆಲ್ಲಾ ನಿರಶನ ಸತ್ಯಾಗ್ರಹದಿಂದ ನಮ್ಮಜ್ಜ ತಡೆದು ಶಾಂತಿಯನ್ನು ಸ್ಥಾಪಿಸಿದರು. ಹಿಂದು ಮುಸ್ಲಿಮರು ಗಾಂಧಿ ಅಜ್ಜನ ಪ್ರಭಾವದಿಂದಲಾಗಿ ಅಣ್ಣತಮ್ಮಂದಿರಂತೆ ಒಬ್ಬರನ್ನೊಬ್ಬರು ಅಪ್ಪಿಕೊಂಡರು?"

"ಅಣ್ಣಾ! ಪ್ರೀತಿಯಿಂದ ಅಹಿಂಸೆಯಿಂದ ನಮ್ಮಜ್ಜ ಜಗತ್ತನ್ನು ಗೆದ್ದರು ಎಂಬುದು ವಿಶ್ವಕ್ಕೇ ಆದರ್ಶವಾಯಿತಲ್ಲಾ!"

"ನಮ್ಮ ದೇಶದ ಕೀರ್ತಿ ಹೆಚ್ಚಿತು, ಆದರೆ ನಾವೇ ನಮ್ಮಜ್ಜನನ್ನು ಕೊಂದೆವಲ್ಲವೇ? ಗಾಂಧೀಜಿ ಮುಸಲ್ಮಾನರ ಹಿತಚಿಂತಕರೆಂದು ಕೆಲ ಮಂದಿ ಭಾವಿಸಿದರು."

"ಗಾಂಧಿ ಅಜ್ಜ ಹಿಂದುಗಳ ಉದಾರತೆಯನ್ನು ತೋರಿಸಿದರಲ್ಲವೇ ಅಣ್ಣಾ!"

"ತಮ್ಮಾ ನಮ್ಮ ಜನತೆಗೆ ಬುದ್ಧಿಯಿಲ್ಲ. ಮಹಾತ್ಮರನ್ನು ಬಾಂಬೆಸೆದು ಕೊಲ್ಲಲು ನಮ್ಮ ಜನತೆ ಬಗೆಯಿತು. ಆದರೆ ಅದು ನಿಷ್ಫಲವಾಯಿತು. ೧೯೪೮ಲನೇ ಇಸವಿ ಜನವರಿ ೩೦ನೇ ತಾರೀಕು ಬಂದಿತು. ಅದೇ ಭಾರತದ ಭಾಗ್ಯವಿಧಾತನನ್ನು ಕಳೆಕೊಂಡ ದಿನ. ತಮ್ಮಾ! ಬಿರ್ಲಾ ಭವನದಿಂದ ಪ್ರಾರ್ಥನಾ ಮಂದಿರಕ್ಕೆ ಸಾಗಿದರು. ಅದೊಬ್ಬ ಹುಚ್ಚನು, ಸೌಜನ್ಯದ ಸೋಗಿನಲ್ಲಿ ಅಡಿಗೆರಗಿ ಅಲ್ಲಿಂದಲೇ ಕರುಣಾಮೂರ್ತಿಯ ಆ ಕೋಮಲ ಹೃದಯಕ್ಕೆ ಗುಂಡಿಕ್ಕಿದನು. ಕೋಮಲಹೃದಯ ಸುಟ್ಟು ಬಾಡಿತು. 'ಹಾರಾಮ್, ಹಾರಾಮ್' ಎಂದು ನಮ್ಮಜ್ಜ ಧರೆಗೊರಗಿದರು."

"ಅಣ್ಣಾ! ಇಡೀ ಪ್ರಪಂಚವೇ ಒಂದು ಮನೆ; ಎಲ್ಲರೂ ಒಂದು ಎಂದು ಎಲ್ಲರ ಹಿತವನ್ನು ಸಾಧಿಸಿದ ವ್ಯಕ್ತಿಗೆ ಹೀಗಾಯಿತೇ?"

"ತಮ್ಮಾ! ನಮ್ಮ ದುರದೃಷ್ಟ. ಲೋಕವೇ ಕೊಂಡಾಡುತ್ತಿರುವ ತಮ್ಮ ಗುರುವನ್ನು ದೇಶದ ನಾಯಕನನ್ನು ಭಾರತೀಯರು ಗುಂಡಿಕ್ಕಿ ಕೊಂದರು ಎಂದು ಪ್ರಪಂಚವೇ ನಗುವಂತಾಯಿತು. ಲೋಕವೇ ದುಃಖ ಸಾಗರದಲ್ಲಿ ಮುಳುಗಿತು.

"ಅಣ್ಣಾ! ಕತೆ ಸಾಕು ಮಾಡು. ಕಣ್ಣೀರು ಬರುತ್ತಿದೆ"

"ತಮ್ಮಾ! ಅಹಿಂಸೆಯಿಂದ ಜಗತ್ತನ್ನು ಗೆದ್ದ ನಮ್ಮಜ್ಜನ ಗತಿ ಹೀಗಾಗಬಹುದೇ? ವಿಶ್ವದ ಮಹತ್ತ್ವವು ವಿಭೂತಿಯು ಅವಸಾನವಾಯಿತು. ಭಾರತದ ಬೆಳಗುತ್ತಿದ್ದ ದಿವ್ಯ ಜ್ಯೋತಿ ನಂದಿತು. ಭಾರತದ ಅಮೂಲ್ಯ ರತ್ನ ಕಳಚಿ ಬಿದ್ದಿತು. ಇಡೀ ವಿಶ್ವ ವಿಶ್ವಪ್ರೇಮಿಯ ಮರಣಕ್ಕಾಗಿ ಮರುಗಿತು."

"ಅಣ್ಣಾ! ಗಾಂಧಿಅಜ್ಜ ಸತ್ತರೂ ನನ್ನ ಕಣ್ಣಮುಂದೆಯೇ ಇದ್ದಾರೆ. ಅವರಿಂದಂತೆಯೇ ಮಾಡುವೆನು; ಅವರೇ ನನ್ನ ಗುರು, ಅವರೇ ನನ್ನ ತಾಯಿ, ಅವರೇ ನನ್ನ ತಂದೆ."

"ತಮ್ಮಾ! ನಮ್ಮ ಸರ್ವಸ್ವವೂ ಅವರೇ. ಅವರ ಆಶೀರ್ವಾದ ನಮಗೆ ಅಗತ್ಯ. ಅವರ ಆಶೀರ್ವಾದ ಬಲವೊಂದಿದ್ದರೆ ನಾವು ಪ್ರೀತಿಯಿಂದ ಜಗತ್ತನ್ನು ಗೆಲ್ಲುವೆವು."

"ಅಣ್ಣಾ! ನಾನು ನಿಮ್ಮನ್ನಪ್ಪಿಕೊಳ್ಳುವೆ. ನನಗೆ ಗಾಂಧಿ ಅಜ್ಜನ ದಾರಿ ತೋರಿಸಬೇಕಣ್ಣಾ! ನಾನು ಅವರ ಒಲವು ಸಂಪಾದಿಸುತ್ತೇನೆ. ಹೇಳಿದಂತೆ ಕೇಳುವೆ. ಎಲ್ಲರ ಹಿತಕ್ಕಾಗಿ ದುಡಿಯುವೆ."

"ಮುದ್ದು ತಮ್ಮಾ! ಕಣ್ಣಲ್ಲಿ ನೀರ ಹನಿಯೇಕೆ? ಅಳಬೇಡ, ನಮ್ಮಜ್ಜನನ್ನು ನಾವು ಈ ಕಣ್ಣಿನಿಂದ ಕಾಣೆವಾದರೂ ಅದೋ ಆಕಾಶದಲ್ಲಿ ನಿಂತು ನಮ್ಮಲ್ಲಿ ಪ್ರೇಮಪೂರ್ಣ ದೃಷ್ಟಿ ಬೀರುತ್ತಿದ್ದಾನೆ. ಅದೇ ನಮ್ಮಜ್ಜನ ಮುದ್ದು ಮುಖ. ನಮ್ಮನ್ನು ನೋಡಿ ಮುಗುಳು ನಗುತ್ತಿದ್ದಾನೆ ನಮ್ಮಜ್ಜ. ವಿಶ್ವಶಕ್ತಿ ನಮ್ಮಜ್ಜ. ಆಹಾ! ನಮ್ಮಜ್ಜನ ದಯೆಯೇ! ತಮ್ಮಾ! ನಾನು ನಿನ್ನನ್ನಪ್ಪಿಕೊಳ್ಳುವೆ. ನಾವು ಅಣ್ಣ ತಮ್ಮಂದಿರು. ನಮ್ಮಜ್ಜ ನಮ್ಮನ್ನು ನೋಡಿ ಅದೋ ಹರಸುತ್ತಿದ್ದಾನೆ. ನಮ್ಮಜ್ಜ ನಮ್ಮನ್ನು ಮರೆವನೇ?"

"ಅಣ್ಣಾ! ವಿಶ್ವಪ್ರೇಮಿಯಾದ; ಅಹಿಂಸಾವಾದಿಯಾದ; ಜಗತ್ಕಲ್ಯಾಣ ಕಾಂಕ್ಷಿಯಾದ; ನಮ್ಮಜ್ಜನಿಗೆ ಭಕ್ತಿಪೂರ್ವಕ ನನ್ನ ವಂದನೆ."

"ತಮ್ಮಾ! ನಿನ್ನ ಬಾಳು ಬೆಳಗುವುದು. ನಮ್ಮಜ್ಜನಲ್ಲಿರುವ ನಿನ್ನ ಈ ಭಕ್ತಿಯೇ ನಿನ್ನನ್ನು ಸತ್ಕಾರ್ಯದಲ್ಲಿ ಮುನ್ನಡೆಸಿ ನಿನಗೆ ಗೆಲುವನ್ನು ತರುವುದು. ನಿನಗೆ ಮಂಗಳವಾಗಲಿ."



Saraswathi Printing Works, Limited, Mangalore.

# — ವಿವೇಕ ಸಾಹಿತ್ಯ ಮಾಲೆ —

ಡಿ. ನಂಬ್ರ 6-41—ಮಣ್ಣಗುಡ್ಡೆ,

**ಮಂಗಳೂರ-3 (ದ. ಕ.)**

- ವರ್ಷ ಒಂದರ 600ಕ್ಕೂ ಮಿಕ್ಕಿದ ಪುಟಗಳು.
- ವಾರ್ಷಿಕ ಚಂದಾ ಅಂಚೆವೆಚ್ಚ ಸೇರಿ ಕೇವಲ ಆರು ರೂಪಾಯಿ ಮಾತ್ರ.

ಮುಂದಿನ ಪ್ರಕಟಣೆಗಳು

## "ಕುಟ್ಟಿ ದೊಣ್ಣೆ"

(ಕಥಾ ಸಂಗ್ರಹ)

ಲೇ. ಎಮ್. ಸುಬ್ರಾಯನ್.



## "ಸ್ವರ್ಗ ಲೋಕ"

(ನಾಟಕ)

ಲೇ. ಎಮ್. ಕೆ. ಭಟ್ಟ, ವಿದ್ವಾನ್.



ಇನ್ನಿತರ ಕೃತಿಗಳು